ಜೈನಸಾಹಿತ್ಯ ಪ್ರಚಾರಸಂಘ ಮತ್ತು ಜೈನ ಓರಿಯಂಟಲ್ ರೀಸರ್ಚ್
ಇನ್ಸ್ಟಿಟ್ಯೂಟ್, ಮೈಸೂರು

ಸನ್ಮತಿ ಗ್ರಂಥಮಾಲಾ ಪುಷ್ಪ ೨೪

ರನ್ನನ

# ಕುರುಕ್ಷೇತ್ರ

(ವಿಮರ್ಶೆ)

ಲೇಖಕರು:

**ಶ್ರೀ. ಜಿ. ಬ್ರಹ್ಮಪ್ಪ,** ಬಿ.ಎ., (ಆನರ್ಸ್)

ಪ್ರಕಾಶಕರು:

**ಶ್ರೀ. ಎಂ. ಜೆ. ವಜ್ರನಾಭಯ್ಯನವರು**

ಐರ್ನ ಮರ್ಚೆಂಟ್, ಮೈಸೂರು

1955

ಮುದ್ರಕರು:
ಶ್ರೀ ಜಯಲಕ್ಷ್ಮೀ ಪ್ರೆಸ್, ಮೈಸೂರು



| | | | | | |
|---|---|---|---|---|---|
| ಸಾಧಾರಣ ಪ್ರತಿ | .... | .... | ೧ | ೪ | ೦ |
| ಉತ್ತಮ ಪ್ರತಿ | .... | .... | ೧ | ೮ | ೦ |
| ಕ್ಯಾಲಿಕೋ | .... | .... | ೨ | ೮ | ೦ |

# ಮೊದಲ ನುಡಿ

ರನ್ನನ ಕುರುಕ್ಷೇತ್ರವನ್ನು ಬರೆದು ಎರಡು ವರ್ಷವಾಯಿತು. ಶ್ರೀ. ಪ. ನಾಗರಾಜಯ್ಯನವರು ಹಸ್ತ ಪ್ರತಿಯನ್ನೋದಿ ಮೆಚ್ಚಿಕೊಂಡರು. ಶ್ರೀ. ಡಿ. ಪುಟ್ಟಸ್ವಾಮಿ, ಬಿ.ಎ., ಬಿ.ಎಲ್., ರವರು ಈ ಗ್ರಂಥದ ಪೂರ್ವಾರ್ಧವನ್ನು ವಿವೇಕಾಭ್ಯುದಯದಲ್ಲಿ ಸ್ವಲ್ಪಸ್ವಲ್ಪವಾಗಚ್ಚುಮಾಡಿ ಪ್ರಚಾರ ಮಾಡಿದರು. ಹಿಂದೊಮ್ಮೆ ನಾನು ಬರೆದ "ಪಂಪನ ಕಲಿಕರ್ಣ" ಎಂಬ ಗ್ರಂಥವನ್ನು ಪೂಜ್ಯ ಎಂ. ಜೆ. ವಜ್ರನಾಭಯ್ಯನವರು ಜೈನಸಾಹಿತ್ಯ ಪ್ರಚಾರ ಸಂಘದಲ್ಲಿ ಅಚ್ಚುಮಾಡಿಸಿದ್ದರು; ಆ ಪ್ರತಿಗಳು ಮಾರಾಟವಾಗಿ ಬಂದ ಹಣದಿಂದ ಈ ಗ್ರಂಥವನ್ನು ಜೈ. ಸಾ. ಪ್ರ. ಸಂಘದ ಕಾರ್ಯದರ್ಶಿಗಳಾದ ಶ್ರೀ. ಎಂ. ಸಿ. ಪದ್ಮನಾಭಶರ್ಮರು ಅಚ್ಚುಹಾಕಿಸಿದಾರೆ. ಮುದ್ರಣ ದೋಷಗಳನ್ನು ತಿದ್ದಲು ಶ್ರೀ. ವಿದ್ವಾನ್ ಎಸ್. ಎನ್. ಕೃಷ್ಣಜೋಯಿಸರು ತುಂಬ ಶ್ರಮವಹಿಸಿದರು. ಶ್ರೀ ಜಯಲಕ್ಷ್ಮೀ ಪ್ರೆಸ್ಸಿನ ನಿರ್ವಾಹಕರಾದ ಶ್ರೀ. ಪದ್ಮರಾಜಪಂಡಿತರು ಸಕಾಲದಲ್ಲಿ ಅಚ್ಚುಮಾಡಿಕೊಟ್ಟಿದ್ದಾರೆ. ಈ ಮಹನೀಯರಿಗೆಲ್ಲ ನನ್ನ ಹೃತ್ಪೂರ್ವಕವಾದ ವಂದನೆಗಳು.

10—10—1955 ಜಿ. ಬ್ರಹ್ಮಪ್ಪ, ಮೈಸೂರು

# ಸಂಪಾದಕರ ನುಡಿ

ಮಾನ್ಯಮಿತ್ರರಾದ ಶ್ರೀ. ಜಿ. ಬ್ರಹ್ಮಪ್ಪನವರು "ರನ್ನನ ಕುರುಕ್ಷೇತ್ರ" ಎಂಬ ಗ್ರಂಥವನ್ನು ಬರೆದು ರನ್ನನಪ್ರತಿಭೆಯನ್ನು ಕನ್ನಡನಾಡಿನ ಆಬಾಲವೃದ್ಧರಿಗೂ ತಿಳಿವಂತೆ ತಿಳಿಗನ್ನಡದಲ್ಲಿ ಗದಾಯುದ್ಧವನ್ನು ವಿಮರ್ಶಿಸಿದ್ದಾರೆ. ಶ್ರೀ. ಜಿ. ಬ್ರಹ್ಮಪ್ಪನವರು ಹಿಂದೆ ಪಂಪನ ಕಲಿಕರ್ಣ, ಪಂಪನ ಭರತ ಬಾಹುಬಲಿ, ಹರಿಹರನ ಗಿರಿಜಾಶಂಕರರು ಮುಂತಾದ ವಿಮರ್ಶಾತ್ಮಕ ಗ್ರಂಥಗಳನ್ನು ಬರೆದು ಚಿರಪರಿಚಿತರಾಗಿದಾರೆ; ಶ್ರೀ. ಎಂ. ಜೆ. ವಜ್ರನಾಭಯ್ಯನವರು ಹಿಂದೆ ಪಂಪನ ಕಲಿಕರ್ಣನ ಪ್ರಕಟಣೆಗೆ ಸಹಾಯಮಾಡಿದ್ದರು. ಆ ಪ್ರತಿಗಳು ಖರ್ಚಾಗಿ ಬಂದ ಹಣದಿಂದ ಈ ಗ್ರಂಥವನ್ನು ಅವರ ಹೆಸರಿನಲ್ಲೇ ಪ್ರಕಟಿಸಿರುವೆವು. ಇವರು ಗುಪ್ತವಾಗಿ ಅನೇಕ ದಾನಧರ್ಮಗಳನ್ನು ಮಾಡಿ ಜೈನಧರ್ಮದ ಉದ್ಧಾರಮಾಡಿರುವರು. ಇವರ ಸಾಹಿತ್ಯ ಸೇವೆಗೆ ಸಂಘ ಚಿರಋಣಿಯಾಗಿದೆ, ಶ್ರೀ. ಜಿ. ಬ್ರಹ್ಮಪ್ಪನವರ ಈ ಕೃತಿಯನ್ನು ಸಂಘ ಸಂತೋಷದಿಂದ ಅಚ್ಚುಹಾಕಿದೆ. ಈ ಲೇಖಕರಿಗೂ ಅನಂತ ಧನ್ಯವಾದಗಳು.

ಎಂ. ಸಿ. ಪದ್ಮನಾಭಶರ್ಮ,
ಮೈಸೂರು

ಮ. ಶ. ೨೬೧೭

ಧರ್ಮಸ್ಥಳದ ಧರ್ಮಾಧಿಕಾರಿಗಳೂ, ಅಗರ್ಭ ಶ್ರೀಮಂತರೂ, ಅನುಪಮ ದೈವ ಭಕ್ತರೂ ಸಹೃದಯಚಕ್ರವರ್ತಿಗಳೂ, ಆಗಿ ಪೂಜ್ಯ

## ಮಂಜಯ್ಯ ಹೆಗ್ಗಡೆಯವರು

ರಾರಾಜಿಸಿದರು !



ಕನ್ನಡ ಬರಹಗಾರರ ಕಲ್ಪವೃಕ್ಷದಂತಿದ್ದ ಈ ಮಹನೀಯರು ತಾ|| 31–8–55 ರಂದು ಸಮಾಧಿಮರಣವನ್ನು ಪಡೆದರು, ಇವರ ಕಾಲ ದಲ್ಲಿ ಧರ್ಮಸ್ಥಳ ಸಮವಸರಣದಂತೆ ಜೀವಕೋಟಿಗೆ ಶಾಂತಿ ಸಮಾಧಾನ ವಿತ್ತಿತೆಂದರೆ ಅತಿಶಯೋಕ್ತಿಯಾಗದು.

ಪೂಜ್ಯ ಹೆಗ್ಗಡೆಯವರಿಂದ ಈ ಗ್ರಂಥಕರ್ತರೂ ಜೈನ ಸಾಹಿತ್ಯ ಪ್ರಚಾರ ಸಂಘವೂ ಪಡೆದ ನೆರವು ಅಷ್ಟಿಷ್ಟಲ್ಲ. ರನ್ನನ ಕುರುಕ್ಷೇತ್ರವನ್ನು ಪೂಜ್ಯ ಹೆಗ್ಗಡೆಯವರಿಗೆ ಅರ್ಪಿಸುವುದರ ಮೂಲಕ ನಮ್ಮ ಭಕ್ತಿಕಾಣಿಕೆ ಯನ್ನು ಸಲ್ಲಿಸುವೆವು.

ಜಿ. ಬ್ರಹ್ಮಪ್ಪ, ಎಂ. ಸಿ. ಪದ್ಮನಾಭಶರ್ಮ

# ವಿಷಯ ಸೂಚಿ



---

*ಗದಾಯುದ್ಧದ ಮಾತುಗಳನ್ನು ಉದ್ಧರಿಸುವಾಗ ಸೂಚಿಸಿರುವ ಕ್ರಮಸಂಕೆ ಶ್ರಿ.ತೀ.ನಂ.ಶ್ರೀಯವರ ಗದಾಯುದ್ಧ ಸಂಗ್ರಹವನ್ನನುಸರಿಸಿದೆ.

# ಪೀಠಿಕೆ

ಒಂಭತ್ತು ಹತ್ತನೆ ಶತಮಾನಗಳಲ್ಲಿ ಜೈನಧರ್ಮ ಕರ್ಣಾಟಕದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಜೀವನದ ಎಲ್ಲ ಮುಖಗಳಲ್ಲೂ ತನ್ನ ಪ್ರಭಾವವನ್ನು ಬೀರುತ್ತಿತ್ತು; ಸಮಾಜದ ಪ್ರತಿಯೊಂದು ಚಟುವಟಿಕೆಯಲ್ಲೂ ಜೈನಧರ್ಮ ಹಾಸುಹೊಕ್ಕಾಗಿ ಬೆರೆದಿತ್ತು. ನಾನಾ ರಾಜಮನೆತನಗಳು ಜೈನಮತಾವಲಂಬಿಗಳಾಗಿದ್ದವು. ಅಂದಿನ ಸಾಹಿತ್ಯವೆಲ್ಲ ಜೈನಸಾಹಿತ್ಯ; ಉಭಯ ಭಾಷಾಪಂಡಿತರಾದ ಜೈನಕವಿಗಳು ಜನತೆಯ ಮನೆಮಾತಾದ ಕನ್ನಡದಲ್ಲೇ ಮಹಾಕಾವ್ಯಗಳನ್ನು ರಚಿಸತೊಡಗಿದರು. ತೀರ್ಥಂಕರನ ಜೀವನ ರಹಸ್ಯವನ್ನು ನಾಡಿನಲ್ಲೆಲ್ಲಾ ಹರಡಿ ಆಧ್ಯಾತ್ಮಿಕ ಏಳಿಗೆಯನ್ನು ಸಾಧಿಸಿದರು. ಜನಸಾಮಾನ್ಯರಲ್ಲಿ ಸಾಹಿತ್ಯಾಭಿರುಚಿಯನ್ನು ಬೆಳೆಸಲು ಭಾರತರಾಮಾಯಣಗಳನ್ನು ಕನ್ನಡದಲ್ಲಿ ರಚಿಸಿದರು.

ಈ ವೇಳೆಯಲ್ಲಿ ಕನ್ನಡನಾಡು ವೀರಯುಗದಲ್ಲಿ ಮಿಂದಿತ್ತು; ಎತ್ತಿತ್ತಲೂ ಸಾಹಸಮನೋಭಾವ ಜನತೆಯಲ್ಲಿ ಬೇರೂರಿತ್ತು. ಆಗಾಗ ಕರ್ಣಾಟಕದ ಮೂಲೆಮೂಲೆಗಳೂ ರಣಕಹಳೆಯ ಮೊಳಗಿನ ಮಾರ್ದನಿಯನ್ನೀಯುತ್ತಿದ್ದವು; ಭಟವೃಂದದ ಕೈದುಗಳ ಕಾಂತಿ ಕನ್ನಡದೇವಿಯ ಮುಖವನ್ನು ಬೆಳಗುತ್ತಿತ್ತು. ಸಾಹಸದ ಜೊತೆಗೆ ರಸಿಕತೆಯೂ ಹೊಯ್‌ಕೈಯಾಗಿ ನಾಡಿನಲ್ಲಿದ್ದುದರಿಂದ ವೀರರಸ ಪ್ರಧಾನವಾದ ಸಾಹಿತ್ಯದ ಹೊನಲು ಹರಿಯಿತು. ವೀರಯುಗದಲ್ಲಿ ಕನ್ನಡಾಂಬೆಯ ವೀರಕುಣಿತದ ಕೊನೆಯ ಚರಣವೇ ರನ್ನಮಹಾಕವಿಯ ಸಾಹಸಭೀಮವಿಜಯ! ವೀರರಸವನ್ನು ನಾಡಿನಲ್ಲೆಲ್ಲಾ ಹರಿಸಿದ ಕವಿಗಳಲ್ಲಿ ಕೊನೆಯವನೆ ಕವಿಚಕ್ರವರ್ತಿರನ್ನ!

ರನ್ನಮಹಾಕವಿ ತನ್ನ ಬಗ್ಗೆ ಬೇಕಾದಷ್ಟನ್ನು ಹೇಳಿ ಕೊಂಡಿದಾನೆ. ಅದನ್ನೆ ವಿಸ್ತರಿಸಿ ಸೊಗಸಾದ ಈತನ ಜೀವನ ಚಿತ್ರವನ್ನು ಬಿಡಿಸಬ

ಹುದು. ಬೆಳುಗೆರೆ ನಾಡಿನಲ್ಲಿ ಜಂಬುಖಂಡಿ ಎಪ್ಪತ್ತರಲ್ಲಿ ಮುದುವೊಳಲೆಂಬ ಒಂದುಗ್ರಾಮವಿತ್ತು. ಜಿನೇಂದ್ರವಲ್ಲಭನೆಂಬ ಜಿನಭಕ್ತ ಆಊರಲ್ಲಿದ್ದ. ಈತನ ಪತ್ನಿ ಅಬ್ಬಲಬ್ಬೆ; ಜಿನೇಂದ್ರವಲ್ಲಭ ಜೀವನಕ್ಕಾಗಿ ಬಳೆಗಾರನಾಗಿ ಬಾಳಿದ. ಈದಂಪತಿಗಳು ಅನ್ಯೋನ್ಯವಾಗಿ ಪ್ರೀತಿಸುತ್ತ ಇದ್ದುದರಲ್ಲಿ ತೃಪ್ತರಾಗಿ ಬಾಳಿಕೊಂಡಿದ್ದರು. ಈದಂಪತಿಗಳ ಪುತ್ರರತ್ನವೇ ಕವಿಚಕ್ರವರ್ತಿರನ್ನ! ಕ್ರಿ. ಶ 917ರಲ್ಲಿ ರನ್ನ ಜನ್ಮತಾಳಿದನು. ಪಂಪ ಆದಿಪುರಾಣವನ್ನು ರಚಿಸಿ ಎಂಟುವರ್ಷವಾದಮೇಲೆ ಕನ್ನಡಾಂಬೆ ಇನ್ನೊಬ್ಬ ಅನುಪಮಕವಿಗೆ ಜನ್ಮವಿತ್ತಳು. ಹತ್ತನೇ ಶತಮಾನದಲ್ಲೀ ಮೂವರು ಮಹಾಕವಿಗಳು ಹುಟ್ಟಿದುದು ಕನ್ನಡಿಗರ ಪುಣ್ಯವೆಂದೇ ಹೇಳಬೇಕು. ಮೊದಲು ಪಂಪ ಅನಂತರ ಪೊನ್ನ ಆದಾದಮೇಲೆ ರನ್ನ ಈ ರೀತಿ ಅನುಪಮ ರತ್ನತ್ರಯರು ಜನಿಸಿ ಕನ್ನಡ ಕಾವ್ಯಾಂಬರದ ಧ್ರುವತಾರೆಗಳಾಗಿ ರಾರಾಜಿಸುತ್ತಾರೆ. ರನ್ನನಿಗೆ ರೃಢಬಾಹು, ಕೀಚಣ ಮಾರಯ್ಯ ಎಂಬ ಮೂವರು ಸಹೋದರರಿದ್ದರು. ಬಡತನದಲ್ಲಿ ಬೆಂಡಾದ ಜಿನೇಂದ್ರವಲ್ಲಭ ಮಕ್ಕಳನ್ನು ಓದಿಸುವಷ್ಟು ಅನುಕೂಲನಾಗಿರಲಿಲ್ಲ. ಆಗಿನ ಕಾಲದಲ್ಲಿ ಈಗಿನಂತೆ ಹಳ್ಳಿಹಳ್ಳಿಗು ಪಾಠಶಾಲೆಗಳೆಲ್ಲಿಂದ ಬರಬೇಕು? ರನ್ನನಂಥ ಪ್ರತಿಭಾಶಾಲಿಗೆ ತರಪೇತೀಯುಲು ಬೃಹಸ್ಪತಿಯಂಥ ವಿದ್ವಾಂಸರು ಅಕ್ಕಪಕ್ಕದಲ್ಲಿ ಯಾರೂ ಇರಲಿಲ್ಲವೆಂದು ಕಾಣುತ್ತೆ. ಕೆಲಕಾಲ ರನ್ನ ಮನೆಯಲ್ಲೇ ಕೊಳೆಯಬೇಕಾಗಿ ಬಂದಿತು. ವಿಧಿಯಿಲ್ಲದೆ ಈ ಮಗು ತನ್ನ ಜ್ಞಾನ ಪಿಪಾಸೆಯನ್ನಡಗಿಸಿ ಕೊಳ್ಳಬೇಕಾಯಿತು. ಕೆಲಕಾಲ ಕಳೆದ ಮೇಲೆ ಚಾಮುಂಡರಾಯನನುಗ್ರಹ ಈ ಮಗುವಿನ ಮೇಲೆ ಬಿದ್ದಿತು. ಚಾಮುಂಡರಾಯನ ಕಣ್ಣಿಗೆಬಿದ್ದ ನಿರ್ಜೀವವಾದ ಕಗ್ಗಲ್ಲೂಕೂಡ ಭವ್ಯಾಕಾರದ ಗೋಮಟ ಮೂರ್ತಿಯಾಗಿರುವಾಗ ರನ್ನನಂಥ ಪ್ರತಿಭಾಸಂಪನ್ನನನ್ನು ಕೇಳಬೇಕೆ!

ಚಾಮುಂಡರಾಯ ಅಂದು ಗಂಗರಾಜ್ಯದಲ್ಲಿ ಮಂತ್ರಿಯಾಗಿದ್ದ. ರನ್ನನ ಕುಶಾಗ್ರ ಬುದ್ಧಿಯನ್ನು ಕಂಡು ಪ್ರತಿಭಾವಂತನಾಗುವನೆಂದೂಹಿಸಿ ಆತನಿಗೆ ಆಶ್ರಯವಿತ್ತನು. ತನ್ನಮಗುವೆಂದೇ ರನ್ನನನ್ನು ಸಾಕಿಸಲಹಿದನು.

ಸಾಕುವುದರ ಜೊತೆಗೆ ಕನ್ನಡ ಮತ್ತು ಸಂಸ್ಕೃತಗಳಲ್ಲಿ ಮಹಾವಿದ್ವಾಂಸನಾಗುವಷ್ಟು ಈತನನ್ನು ಓದಿಸಿದನು. ಲೌಕಿಕ ಮತ್ತು ಪಾರಮಾರ್ಥಿಕಗಳೆರಡರಲ್ಲೂ ಈತ ಪಾರಂಗತನಾದ. ರಾಜಮಹಾರಾಜರಿಗೆ ಗುರುವಾದ ಅಜಿತಸೇನಚಾರ್ಯರ ಬಳಿಯೇ ಈ ಬಳೆಗಾರರ ಮಗು ರನ್ನ ವಿದ್ಯೆಯನ್ನು ಕಲಿತನು ! ಅಜಿತಸೇನಾಚಾರ್ಯರ ಶಿಷ್ಯವೃಂದದಲ್ಲಿ ರನ್ನನಂಥ ಪ್ರತಿಭಾವಂತ ಮತ್ತೊಬ್ಬನಿರಲಿಲ್ಲ; ಎಲ್ಲರನ್ನೂ ಮೀರಿಸಿ ರನ್ನ ಸಕಲವಿದ್ಯೆಗಳನ್ನೂ ಬೇಗ ಬೇಗ ಕಬಳಿಸಿ ಕವಿರನ್ನ ನಾಗುವನು! ಚಾಮುಂಡರಾಯ ರನ್ನನನ್ನು ಸಾಕಿದ; ವಿದ್ಯಾವಂತನಾಗುವಂತೆ ಮಾಡಿದ; ಅಷ್ಟಕ್ಕೆ ಸುಮ್ಮನಿರವೆ ರಾಜಾಸ್ಥಾನಗಳ ಪರಿಚಯುವನ್ನೂ ಮಾಡಿಕೊಟ್ಟ: ಬೆರಳು ತೋರಿದರೆ ಸಾಕು ಹಸ್ತನುಂಗುವ ಚಾತುರ್ಯವಿದ್ದ ರನ್ನನಿಗಿನ್ನೇನಾಗಬೇಕು !

* *

ಉಭಯಭಾಷಾ ಪಂಡಿತನಾದ ರನ್ನ ಕವಿತಾಸಾಮ್ರಾಜ್ಯದ ಸಮ್ರಾಟನೆನಿಸಿಕೊಳ್ಳಲು ದಿಗ್ವಿಜಯಕ್ಕೆ ಹೊರಟನು! ಮೊದಲು ಮೊದಲು ಸಾಮಂತ ರಾಜರ ಆಸ್ಥಾನದಲ್ಲಿ ತನ್ನ ವಿದ್ವತ್ತನ್ನು ಪ್ರದರ್ಶಿಸಿ ಸೈ ಎನಿಸಿಕೊಂಡು, ಬಳಿಕ ಮಂಡಲೇಶ್ವರರ ಬಳಿ ತನ್ನ ಪಾಂಡಿತ್ಯವನ್ನು ತೋರಿ ಅನಂತರ ಸತ್ಯಾಶ್ರಯನೆಂಬ ಚಾಳುಕ್ಯ ಚಕ್ರವರ್ತಿಯ ಆಶ್ರಯದಲ್ಲಿ ಬಹುಕಾಲ ನಿಂತನು. ರನ್ನ ತನ್ನ ಕೀರ್ತಿ ಧ್ವಜವನ್ನು ಮೆರೆಸುತ್ತಾ ಕನ್ನಡನಾಡನ್ನೆಲ್ಲ ಸುತ್ತಿರಬಹುದು. ಸತ್ಯಾಶ್ರಯನ ಆಶ್ರಯದಲ್ಲಿದ್ದಾಗಲೇ ಈತ ಸರಸ್ವತಿಯ ಭಂಡಾರವನ್ನು ದೋಚಿದುದು! ಹಿಂದೆ ಯಾರೂ ಬರೆಯದಂಥ ಕಾವ್ಯ ಕಲ್ಪತರುವನ್ನು ರನ್ನ ಕನ್ನಡಿಗರಿಗಿತ್ತುದುದು ! ಈ ಕಾವ್ಯವನ್ನಾಲಿಸಿ ಸತ್ಯಾಶ್ರಯ ರನ್ನನನ್ನು ಕವಿಚಕ್ರಿಯೆಂದು ಕೀರ್ತಿಸಿ ಈ ಚಕ್ರವರ್ತಿಗೆ ಗೌರವ ಚಿನ್ಹೆಗಳಾಗಿ ಕನಕದಂಡ ಚಾಮರ, ಆನೆ ಛತ್ರಿ ಮೊದಲಾದ ಬಿರುದು ಬಾವಲಿಗಳನ್ನೂ ಬತ್ತೆಗಾನೆ ಎಂಬ ಜೋಡಿಯನ್ನೂ ಕೊಟ್ಟು ಕೊಂಡಾಡಿದನು. ಈ ವೇಳೆಯಲ್ಲಿ ರನ್ನನ ಸ್ವಾಭಿಮಾನದ ಸುವಚನಗಳನ್ನಾಲಿಸಿದ ಕನ್ನಡಿಗನಿಗೆ ರೋಮಾಂಚನವಾಗದಿರದು.

ಪಡೆಯೆಡೆಯ ಕಡೆಯ ಬಡವರ್
ಕುಡೆಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್|
ಪಡೆದಂ ಮಹಿಮೋನ್ನತಿಯುಂ
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ||

ನಿರ್ಗತಿಕರಿಂದ ರನ್ನ ಏನನ್ನೂ ಪಡೆಯಲಿಲ್ಲವಂತೆ. ಈತನಿಗೆ ಕವಿಚಕ್ರವರ್ತಿ ಬಿರುದಿತ್ತಾತ ತೈಲಪ ಚಕ್ರವರ್ತಿಯಂತೆ !

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ |
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ||

ಹಿಂದಾರೂ ಈತನಷ್ಟು ಪ್ರತಿಭಾವಂತರಿಲ್ಲವಂತೆ; ಸರಸ್ವತಿಯ ಭಂಡಾರ ಮುದ್ರೆಯನ್ನೊಡೆದು ಅಲ್ಲಿದ್ದ ಸಂಪತ್ತನ್ನೆಲ್ಲ ತಂದು ತನ್ನ ಕಾವ್ಯ ರಚನೆಗೆ ಉಪಯೋಗಿಸಿ ಕೊಂಡಿದ್ದಾನಂತೆ ಈ ಕವಿರತ್ನ !

ರತ್ನಪರೀಕ್ಷಕನಾಂ ಕೃತಿ
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ |
ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇಳ್ ಪರೀಕ್ಷಿಪಂಗೆಂಟೆರ್ದೆಯೇ

"ರತ್ನಪರೀಕ್ಷಕ ಹೇಗೆ ಫಣಿಪತಿಯ ಫಣಾರತ್ನವನ್ನು ಪರೀಕ್ಷಿಸಲು ಸಾಧ್ಯವಿಲ್ಲವೋ ಅಂತೆಯೇ ವಿಮರ್ಶಕ ರನ್ನನ ಕಾವ್ಯವನ್ನು ಪರೀಕ್ಷಿಸಲಾರ! ಅಂತು ರನ್ನನ ಕಾವ್ಯದ ತಂಟೆಗೆ ಬರಬೇಕಾದರೆ ಎಂಟೆದೆಯಿರಲಿ!" ಇದು ಸಾಮಾನ್ಯರ ಮಾತಲ್ಲ, ಕವಿಚಕ್ರಿಯ ಬಾಯಿಂದ ಹೊರಟ ವಾಗ್ವಿಲಾಸ ! ಈತನನ್ನು ಕವಿಚಕ್ರಿಯನ್ನಾಗಿಮಾಡಿದ ಕೃತಿರತ್ನವೇ ಸಾಹಸಭೀಮ ವಿಜಯ ! ಈ ಗ್ರಂಥವೇ ಕಾವ್ಯವನಿತೆಯ ಕಸ್ತೂರಿತಿಲಕ !

ಗದಾಯುದ್ಧದ ರಚನಾಕಾಲವಲ್ಲಿ ಭಿನ್ನಾಭಿಪ್ರಾಯವಿದೆ. ಕ್ರಿ. ಶ. ೧೦೦೮ ಎಂದೂ* ೯೮೨ ರಲ್ಲಿ ರನ್ನ ೩೩ ವರ್ಷದವನು ಹರಯದಲ್ಲೇ ಗದಾಯುದ್ಧ ಬರೆದಿರಬೇಕು ಎಂದೂ ವಾದವಿವಾದವಿವೆ×. ಕವಿಚರಿತ್ರೆಕಾರರು ೯೮೨ನ್ನು ಅಂಗಿಕರಿಸಿದ್ದಾರೆ. ಭೀಮನ ಪರಾಕ್ರಮಕ್ಕೆ ಸತ್ಯಾಶ್ರಯನ ಸಾಹಸವನ್ನೂ ಬೆರೆಸಿ ಕವಿಚಕ್ರವರ್ತಿ ಈ ಗ್ರಂಥವನ್ನು ಸೃಷ್ಟಿಸಿದನು. ಪಂಪ ವಿಕ್ರಮಾರ್ಜುನ ವಿಜಯವನ್ನು ಬರೆದಂತೆ ರನ್ನ ಸಾಹಸಭೀಮವಿಜಯವನ್ನು ಬರೆದ. ಅಜಿತಪುರಾಣವನ್ನು ದಾನಚಿಂತಾಮಣಿ ಅತ್ತಿಮಬ್ಬೆ ರನ್ನನ ಕೈಲಿ ಬರೆಸಿರುವಳು. ಈ ಗ್ರಂಥವನ್ನು ರಚಿಸಿದ ಕಾಲ ಕ್ರಿ. ಶ. ೯೯೩.

ರನ್ನಕವಿಗೆ ಇಬ್ಬರು ಹೆಂಡಿರಿದ್ದರು. ಒಂದು ಗಂಡು, ಒಂದು ಹೆಣ್ಣು ಹೀಗೆ ಇಬ್ಬರು ಮಕ್ಕಳಿದ್ದರು. ಪರಶುರಾಮ ಚರಿತೆ, ಚಕ್ರೇಶ್ವರ ಚರಿತೆ ಅಜಿತಪುರಾಣ ಇಂತು ಮೂರು ಕಾವ್ಯಗಳನ್ನು ಬರೆದುದಾಗಿ ಕವಿಯೇ ತಿಳಿಸಿದಾನೆ. ಚಕ್ರೇಶ್ವರಚರಿತೆಯೇ ಗದಾಯುದ್ಧವೆಂದು ಊಹಿಸುತ್ತಾರೆ. ಪರಶುರಾಮ ಚರಿತೆ ನಮಗೆ ದೊರೆತಿಲ್ಲ.

## ಪಂಪ—ರನ್ನ

ಪಂಪ ಭಾರತದ ಕೊನೆಯ ಎರಡು ಆಶ್ವಾಸಗಳನ್ನು ಹಿಗ್ಗಲಿಸಿ ರನ್ನ ಮಹಾಕವಿ ಸಾಹಸ ಭೀಮವಿಜಯವನ್ನು ರಚಿಸಿದಾನೆ. ಪಂಪನ ಕಥೆಯನ್ನೂ ಕಥನರೀತಿಯನ್ನೂ ಬೇಕೆಂದಾಗ ಭಾವವನ್ನೂ ಅವಶ್ಯಕತೆ ಬಿದ್ದಾಗ ವೃತ್ತಗಳನ್ನೂ ರನ್ನ ಹಿಂದುಮುಂದು ನೋಡದೆ ಬಳಸಿಕೊಂಡಿದಾನೆ. ಎರಡು ಕೃತಿಗಳನ್ನೂ ಹೋಲಿಸಿ ನೋಡಿದರೆ ರನ್ನಮಹಾಕವಿ ಪಂಪನಿಗೆಷ್ಟು ರಿಣಿ ಎಂಬುದು ಮನವರಿಕೆಯಾದೀತು.

---

*ಶ್ರೀ. ಎಂ. ಎ. ದೊರೆಸ್ವಾಮಿ ಅಯ್ಯಂಗಾರ್: ರನ್ನಕವಿ ಪ್ರಶಸ್ತಿ, ಪು ೧೬-೨೦

× ಶ್ರೀ. ಬಿ. ಎಂ. ಶ್ರೀಕಂಠಯ್ಯ: ಕನ್ನಡ ಕೈಪಿಡಿ ಸಂಪುಟ ೨, ಪು ೫೮೫

ಅರಿಕೇಸರಿಯನ್ನು ಕಥಾನಾಯಕನನ್ನಾಗಿಮಾಡಿ ಅರ್ಜುನನಿಗೆ ಹೋಲಿಸಿಕೊಂಡು ಭಾರತವನ್ನು ಬರೆದು ವಿಕ್ರಮಾರ್ಜುನ ವಿಜಯವೆಂದು ಪಂಪ ಕರೆದರೆ, ಇತ್ತ ಇರಿವಬೆಡಂಗನನ್ನೇ ಭೀಮನೆಂದುಕೊಂಡು ಕಥಾನಾಯಕನನ್ನಾಗಿಮಾಡಿ ರನ್ನಮಹಾಕವಿ ಸಾಹಸಭೀಮ ವಿಜಯವನ್ನು ಬರೆದ. ಅಂತ್ಯದಲ್ಲಿ ಅರಿಕೇಸರಿಯನ್ನು ಪಂಪ ಸಿಂಹಾಸನವೇರಿಸಿದರೆ ಇರಿವ ಬೆಡಂಗನನ್ನು ರನ್ನ ಪಟ್ಟಕ್ಕೆ ಕೂರಿಸುವನು. ರನ್ನ ತನ್ನ ಕಾವ್ಯಕ್ಕೆ ಹೆಸರಿಡುವಾಗಲೂ ಕಾವ್ಯವನ್ನು ಮುಗಿಸಿ ಮಂಗಳವನ್ನು ಹಾಡುವಾಗಲೂ ಪಂಪನನ್ನೇ ಅನುಕರಿಸುವನು.

ಪಂಪ:—ಧೃತರಾಷ್ಟ್ರ ಗಾಂಧಾರಿಯರು ದುರ್ಯೋಧನನ್ನರಿಸಿಕೊಂಡು ಬರುವರು, ಬಂದ ತಾಯಿತಂದೆಗಳಿಗೆ ಆತ ಕಾಲಿಗೆರಗಿದಾಗ "ಇರ್ವರುಂ ಪರಸಿ ತಡವರಿಸಿಯುಂ ತೆಬ್ಬರಸಿಯುಂ ಅಳ್ಕರೊಳ ಪ್ಪಿಕೊಂಡನ್ನುತ ವರ್ಷಿಕರ ಪುಷೇಕದಿಂದೆ...." ೧೩ ವ. ೮

ರನ್ನ:—ಇದೇ ಸಂದರ್ಭದಲ್ಲಿ ಸುಯೋಧನನೆರಗಿದಾಗ ".... .... ತಡವರಿಸಿಯುಂ ತೆಬ್ಬರಿಸಿಯುಂ ತೆಗದಪ್ಪಿಯುಂ" ೪—ವ. ೬.

ಪಂಪ:—ದುರ್ಯೋಧನನ ಬಳಿ ಆತನ ಮಾತಾಪಿತೃರು "ನೀನುಳ್ಳೊಡೆಲ್ಲರೊಳರೆಮ ಗೇನುಮಳಲ್ ಮನದೊಳಿಲ್ಲದೆಂತನೆ...." ೧೩—೧೧

ರನ್ನ:—"ಸತ್ತಮಗಂದಿರ್ ಸತ್ತರ್ ನೀನೆಮಗುಳ್ಳೊಡೆ ಸಾಲ್ವದು...." ೪—೧೦.

ಪಂಪ:—" .... ಮುತ್ತರುಂ ಕುರುಡರುಮೆನ್ನದೆಮ್ಮನುಡಿಗೇಳ್ ಮಗನೆ ಬಗೆತಂದೆಮಗಿಂಬುಕೆಯ್ " ೧೩—೧೨.

ರನ್ನ:—ಪರಿಣತವಯುಸರೆಮಿರ್ಕಣ್ಗುರುಡರೆಮಗಿಂ ಬುಕಯ್ವದುಚಿತಂ...." ೪—೯.

ಪಂಪ:—ಸಂಧಿಮಾಡಿಕೋ ಎಂದು ಕಂಬನಿಮಿಡುವ ತಂದೆ ತಾಯಿಗಳಿಗೆ ಸುಯೋಧನ "ದುಶ್ಶ್ಯಾಸನನ ರಕ್ತಪಾನದೊಳೆ ಸೊರ್ಕಿದ ಪಾತ

ಕನಂ ಪೊರಳ್ಚಿಕೊಂದೀ ...ನಿರ್ದೋಷಿಗಳ್ ಪೃಥಾಸುತರೊಳಿಂ ಮುಗುಳ್ದಂ ಪುದುವಾಳೆನೆಂಬನೇ" ೧೩—೧೪.

ರನ್ನ:—ಸಾಧಿಸುವೆಂ ಫಲ್ಗುಣನಿಂ ಸಾಧಿಸುವೆಂ ಪವನಸುತನ ಬಸಿರಿಂ ಹಾಕರ್ಣಿ ದುಃಶ್ಶಾಸನನ ತೆಗೆವೆಂ ನಿರ್ದೋಷಿ ಬಳಿಕ್ಕೆ ಯಮು ಜನೊಳ್ ಪುದುವಾಳ್ವೆಂ ೪—೧೭.

ಪಂಪ:—ಸುಯೋಧನನನ್ನು ಕುರಿತು ಧೃತರಾಷ್ಟ್ರ ತನ್ನ ತಮ್ಮಂದಿರಲ್ಲಿ ಯಾರಾದರೂ ಒಬ್ಬ ಸತ್ತರೆ ತಾನು ಅಗ್ನಿಯಲ್ಲಿ ಬೀಳುವುದಾಗಿ ಧರ್ಮರಾಯ ಪ್ರತಿಜ್ಞೆತೊಟ್ಟಿದಾನೆ ಆದರಿಂದ ಈಗಲೂ ಕೂಡ ಸಂಧಿಗೊಡಂಬಡುವನು ಎಂದಾಗ ಸುಯೋಧನ

ಎನೆ ನೃಪನೆಂದಂ ಧರ್ಮಜ
ನನುಜರ್ಕಳೊಳೊರ್ವನಳಿದೊಡನಳಿವ ಸುಯೋ।
ಧನನಲ್ಲಿ ನೂರ್ವರುಂ ತ
ನ್ನನುಜರ್ಕಳ್ ಸಾಯೆಬಾಳ್ವುದಂ ನಂಬಿದಿರೇ ೧೩—೧೬

ರನ್ನ:—ತನ್ನೊಡವುಟ್ಟಿದರ್ ಪೆಸರನಾಲ್ವರೊಳೊರ್ವರು ಮಿಲ್ಲದಿರ್ದೊಡಂ
ತನ್ನಸುವಂ ನಿವೇದಿಸುವನಗ್ನಿಗೆ ಧರ್ಮತನೂಜನೆಂದೊಡಾ।
ನೆನ್ನೊಡವುಟ್ಟಿದರ್ ಪೆಸರನೂರ್ವರೊಳೊರ್ವರುಮಿಲ್ಲ ಬಾಳ್ವೆನೆಂ
ಬೆನ್ನಳಿಯಾಸೆಯುಂ ಬಿಸುಡಿಮೆನ್ನವರಾದುದನಾಗದಿರ್ಪನೇ ೪-೧೬.

ಪಂಪ:—"ಪಿಂ ಬಡಿನೊಳೆ ನಣ್ಪಿನಯ್ಯ ನಿಮಗಂ ಮಗನಲ್ಲನೆ ಧರ್ಮ ನಂದನಂ ೧೩—೧೮

ರನ್ನ:—"ಆಂ ಮಗನಾಗೆ ಧರ್ಮಜನೇಂ ಮಗನಲ್ಲನೇ" ೪—೧೯

ದುರ್ಯೋಧನ ಕುರುಭೂಮಿಯಲ್ಲಿ ದೇಸಿಗನಂತೆ ನಡೆದು ಬರುವಾಗ ಪಿಶಾಚಿಗಳು ಆತನನ್ನಿದಿರಿಸಿ ಪರಿಹಾಸ್ಯವೆಸಗುವ ಸಂದರ್ಭವನ್ನು ಮೊಟ್ಟ ಮೊದಲು ಜೋಡಿಸಿದವನೆಂದರೆ ಪಂಪಮಹಾಕವಿಯೇ! ರನ್ನ ಗದಾ ಯುದ್ಧದಲ್ಲಿ ಆ ದೃಶ್ಯವನ್ನೂ ಜೋಡಿಸಿಕೊಂಡಿದಾನೆ.

ಪಂಪ:—ಪಿಶಾಚಿಗಳು ಸುಯೋಧನನೊಡನೆ:
ಮರುಳಿನೆ ಲೋಕದೊಳ್ ನೆಗಳ್ದ ಕೊಸ್ಗಿಕದೊಳ್ ಮರುಳಾಟ
ವಾಡುವಾಂ

ಮರುಳೆನೋ ವಿಕ್ರಮಾರ್ಜುನನೊಳೊಲ್ಲದೆ ಸಂಧಿಯನುರ್ಕಿಕೆಟ್ಟನೀಂ
ಮರುಳಯೋ ಪೇಳ ಪೇಳವೊಡೆ ಪೋಗದಿರೀಶ್ವರನಾಣೆಯೆಂದು ಪು
ಲ್ಮರುಳಿನಿಸಾನುಮಂ ತೆಗೆದು ಕಾಡಿದುದಲ್ಲಿ ಫಣೀಂದ್ರಕೇತುವಂ ೧೩-೫೫

ರನ್ನ;—ಅರಗಿನಮಾಡದೊಳ್........
ವೈರಮುಂ ಪದೆದು ಭೀಮನನಿಂತಿನಿತರ್ಕೆ ತಂದನೀಂ
ಮರುಳೆಯೊ ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ
ಮರುಳೆನೊ ನೋಳ್ಪುಮರ್ವರ ಮರುಳ್ತನಮಂ ಫಣಿರಾಜಕೇತನಾ ೫—೮

.... ....ಸುಳಿಯದೆ ಪೋಗಲೀಯನೆಲೆ ಪೋದೊಡೆ ಧೂರ್ಜಟಿಯಾಣೆ ೫—೯

ಪಂಪ:—ದ್ರೋಣಾಚಾರ್ಯರ ಶವವನ್ನು ಕಂಡಾಗ ಸುಯೋಧನ ಕಂಬನಿ
ಮಿಡಿಯುತ್ತಾ

ನೆಗಳ್ದುದು ಬಿಲ್ಲ ಬಿನ್ನಣಮಿಳಾವಳಯಕ್ಕೆ....
....ನಿಮ್ಮಸರಲ್ಗೆ ದೇವರುಂ || ಸುಗಿವರ್....
....ನಿಮಗಮಿಾಯಿರು ವಾದುದೆ ಕುಂಭಸಂಭವಾ ೧೩-೫೬

ರನ್ನ:—ಅರಿಯೆಮೆ ಬಿಲ್ಲಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ
ನೆರೆಯನಿದಿರ್ಚೆ.... ....ಸಾವುಮಿಾ ತೆರದಿನಕಾರಣಂ ನೆರೆಯೆ
ಸಂಭವಿಸಿರ್ದುದೋಕುಂಭಸಂಭವಾ ೫—೧೨

ಪಂಪ:—ಕರ್ಣನ ಕಳೇಬರದಿದಿರು ಸುಯೋಧನ ರೋಧಿಸುವಾಗ
ಬೆಸನೆಡೆಗಳ್ಗೆ ತೊಳ್ತು ಬೆಸನಂಗಳವುಂಕಿದೊಡಾಗದೆಂದು ಬ
ಗ್ಗಿಸುವೆಡೆಗಾಳ್ದನಿಂತು ನೆಗಳೆಂಬೆಡೆಯೊಳ್ ಗುರು ಪೆರ್ಚಿದೊಂದು ಬೇ।

ವಸದೆಡೆಗಾಶ್ರಯಂ ಮನಮನೊಪ್ಪಿಸುವೀಯೆಡೆಯೊಳ್ ಮನಂ ವಿಚಾ
ರಿಸುವೊಡೆ ಕರ್ಣನಲ್ಲದೆನಗಾವೆಡೆಗಂ ಪೆರನೊರ್ವನಾವನೋ ೧೩–೫೯

ನೆಲನಂ ಕೊಟ್ಟನಿ ನಾತ್ಮಜಾತನೆನಗಾಂ ತಕ್ಕೊರ್ಮೆಯಿಂದಂ ಜಳಾಂ
ಜಲಿಯಂ ಕೊಟ್ಟೆನುಮಿಲ್ಲ ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷ
ದ್ಬಲಮಂ ಸುಟ್ಟನುನಾತ್ತ ಪುಣ್ಯನವನಂ ಚೈತಾಗ್ನಿಯಿಂ ಸುಟ್ಟೆ ನಿ
ಲ್ಲೊಲವಿಂದಿಂತಿರ್ದೆ ಮುಟ್ಟಕೂರ್ತನೊಳನೇ ಕರ್ಣಂಗೆ ಸುಯೋಧನಂ ||
೧೩–೬೦

ಆಗ ಸಂಜಯ ಸುಯೋಧನನನ್ನು ಸಮಾಧಾನಪಡಿಸುವನು.

ಕೊಟ್ಟಲ್ಕಿರ್ಚನುದಗ್ರ ಶೋಕಶಿಖಿಯಿಂ ಕಣ್ಣೀರ್ಗಳಿಂದೆಯ್ದೆ ನೀ
ಗೊಟ್ಟಲ ಸೂರ್ಯಸುತಂಗೆ.... ೧೩–೬೧

ಆಗ ಸುಯೋಧನ"ಶೋಕರಸಮಂ ಕೋಪರಸದ ಮೇಲಿಕ್ಕಿ" ಭೀಷ್ಮರನ್ನು ನೋಡಲು ಹೋಗುವನು ೧೩–೬೧ ವ.

ರನ್ನ:—ಸುಯೋಧನ ಕರ್ಣನ ಕಳೇಬರವಿದಿರು ಕಂಬನಿಮಿಡಿಯುತ್ತಾ

ಗುರುದೀಕ್ಷಾವಿಧಿಗಳ್ಗೆ ಮಂತ್ರಿಹಿತಕಾರ್ಯಾಳೋಚನಕಾಳ್ದನು
ವರೆಯಂ ಕಾವಗುಣಕ್ಕೆ ನರ್ಮಸಚಿವಂ ಕ್ರೀಡಾರಸಕ್ಕಾನೆಯಾಳ್ |
ಗುರುಭಾರಕ್ಕಿರಿವಾಳ್ ರಣಕ್ಕೆ ತುಳಿಲಾಳ್ ಕಟ್ಟಾಯದೊಳ್ ಮೇಳದಾಳ್
ಪರಿಹಾಸಕ್ಕೆ ನಿಪಿರ್ದನೆಂತು ಮರೆವಂ ದುರ್ಯೋಧನಂ ಕರ್ಣನಂ ೫—೪೮

ಕೆಳೆಯಂಗಾಯ್ತು ಸುಮೋಕ್ಷಮಾಗದೆನಗಂ ಬಾಷ್ಪಾಂಬು ಮೋಕ್ಷಂ ಧರಾ
ತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲನ್ಯ ಮಂ
ಡಳಮಂ ಸುಟ್ಟನಿವಂ ಪ್ರತಾಪಶಿಖಿಯಿಂದಾನೀತನಂ ಸತ್ಕ್ರಿಯಾ
ನಳನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತನೋ
೫–೪೪

ಆಗ ಸಂಜಯ ಈತನನ್ನು ಸಮಾಧಾನವೆಸಗುವನು.

ಜಲದಾನಕ್ರಿಯೆಯುಂ ವಾ
ಗ್ಜಲದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯುಂ |
ಕೆಳೆಯಂಗೆ ಮಾಡಿದಯ್ ಕುರು
ಕುಲದರ್ಪಣ ಮರೆವುದಿನ್ನಹರ್ಪತಿಸುತನಂ ೫—೪೫

ಆಗ ಸುಯೋಧನ "ಶೋಕರಸಮಂ ಕೋಪರಸದ ಮೇಲಿಕ್ಕಿ" ಮುಂದೆ ನಡೆದನು:

ಪಂಪ:—ಭೀಷ್ಮ ಶರಶಯನದ ಮೇಲೆ ಮಲಗಿ
ಹರನೊಳೆ ತೆತ್ತಿಕೆತ್ತಿಸಿದ ಚಿತ್ತಮನಿರ್ಬಗೆಯಾಗೆ ಮೋಹನೊ
ತ್ತರಿಸೆ ಸುಯೋಧನಂಗೆ ರಣಭೂಮಿಯೊಳಿಂತುಟವಸ್ಥೆಯೋ....
....ಚಿತ್ತಮಿಾ ದೊರೆಯು ಯೋಗಿಗುಮಿಂತುಟೆ ಮೋಹಮಾಗದೆ ೧೩-೬೩

ರನ್ನ:— ....ಮರೆದನಿಲ್ಲ ಮುಕುಂದನನೇಕ ಚಿತ್ತದಿಂ
ಸ್ಮರಿಯಿಸುತಿರ್ದು ಮತ್ತೆ ಕುರುಭೂಮಿಯೊಳೀಗಳದೆಂತು ಟಾದುದೋ
ಕುರುಪತಿಗೆಂದನಾ ಪರಮಯೋಗಿಗಮಿಂತುಟು ಮೋಹಮಾಗದೆ ೬-೧

ಪಂಪ:—ಸುಯೋಧನ ಮುಳುಗಿದ್ದ ವೈಶಂಪಾಯನದೆಡೆ ಪಾಂಡವರು ಬಂದಾಗ ಭೀಮಸೇನ "ಎನ್ನಸರಂಗೇಳ್ದಲ್ಲದೀ ಭೂತು ಪೊರಮಡುವನಲ್ಲ ನೀತಂಗಾನೆ ಬಲ್ಲೆನ್" ಎನ್ನುವನು. ೧೩—ವ. ೭೬

ರನ್ನ:—ಇದೇ ಸಂದರ್ಭದಲ್ಲಿ ಭೀಮಸೇನ "ಈ ಭೂತು ಎನ್ನಸರಂ ಗೇಳ್ದೊಡಲ್ಲದೆ ಪೊರಮಡವನಲ್ಲಂ ಇವಂಗಾನೆ ಬಲ್ಲೆನ್" ಎನ್ನುವನು.

ಅಶ್ವತ್ಥಾಮ ಸುಯೋಧನನೆಡೆ ಬರುವಾಗ ತನಗಿದಿರಾದ ಲಕ್ಷ್ಮಿಯನ್ನು ಜಡಿದು ಜಂಕಿಸಿ ಮತ್ತೆ ಸುಯೋಧನನತ್ತ ಎಳೆದುಕೊಂಡು ಬರುವ

ವ್ಯಾಸನನ್ನು ಭಾರತದ ಮಧ್ಯೆ ಮೊಟ್ಟಮೊದಲು ಸೇರಿಸಿದವನೆಂದರೆ ಪಂಪನೆ; ಈ ವ್ಯಾಸನನ್ನೂ ರನ್ನಮಹಾಕವಿ ತನ್ನ ಗದಾಯುದ್ಧದಲ್ಲಿ ಅದೇ ಸಂದರ್ಭಕ್ಕೆ ಹೊಂದಿಸಿಕೊಂಡಿದಾನೆ.

ಒಟ್ಟನಲ್ಲಿ ಪಂಪಭಾರತದ ಕೊನೆಯ ಎರಡು ಆಶ್ವಾಸಗಳ ವಸ್ತುವನ್ನೇ ತೆಗೆದುಕೊಂಡು ರನ್ನಮಹಾಕವಿ ಅನುಪಮ ಮಹಾಕಾವ್ಯವನ್ನಾಗಿ ನಿರ್ಮಿಸಿದಾನೆ; ಮೂಲಕ್ಕಿಂತಲು ಮಿಗಿಲಾದ ರಸಪ್ರವಾಹವನ್ನು ಹರಿಸಿದಾನೆ. ಗದಾಯುದ್ಧದ ಪಕ್ಕೆಯಲ್ಲಿ ಭಾರತದ ಕೊನೆಯಭಾಗವನ್ನಿಟ್ಟು ನೋಡಿದರೆ ಪಂಪನ ಕಾವ್ಯಕಲೆ ರನ್ನನ ಮುಂದೆ ಮಂಕಾಗಿ ತೋರದಿರದು; "ವಿಸ್ತಾರದಲ್ಲಿ ಪಂಪಭಾರತ ದೊಡ್ಡದಾದರೂ ವೀರರಸಪ್ರಧಾನವಾದ ಕಾವ್ಯವನ್ನು ಸೃಷ್ಟಿಸಲು ರನ್ನನೇ ಮಿಗಿಲಾದವನೆಂದು ಭಾಸವಾಗದಿರದು; ಅಲ್ಲಿ ಮಂಕಾದ ಭಾಗ ರನ್ನನ ಕೈಸೋಂಕಿನಿಂದ ರಸದ ಹೊನಲಾಯಿತು; ರನ್ನನ ಪ್ರತಿಯೊಂದು ಪದವೂ ತಾಸಿರುವಿಕೆಯನ್ನು ಮಿಂಚಿ ಸಿಡಿಲಿನಂತೆ ರಗದಿರದು. ಸಾಮಾನ್ಯಪದವಾದರೂ ಅದು ರನ್ನನ ಕೈಗೆ ಬಂದಾಗ ಗಾಂಡೀವಿಯ ಅಸ್ತ್ರದಂತೆ ತೀಕ್ಷ್ಣವಾಗುವುದು. ಸರಸ್ವತಿಯ ಭಂಡಾರ ಮುದ್ರೆಯನ್ನು ತಾನೊಡೆದುದಾಗಿ ರನ್ನ ಹೇಳಿಕೊಂಡಿರುವುದು ಹದಿನಾರಣೆ ಸತ್ಯ ! ಪಂಪಭಾರತ ಗಂಭೀರದ ಹೊನಲಾಗಿ ಬಹುದೂರವರಿವ ಗಂಗೆಯಾದರೆ ರನ್ನನ ಗದಾಯುದ್ಧ ಬೆಟ್ಟದ ತುದಿಯಿಂದ ಪ್ರಪಾತಕ್ಕುರುಳುವ ಜಲಪಾತದಂತೆ ! ಕನ್ನಡ ಭಾಷಾಮೃತವನ್ನು ಕರೆದು ಒಪ್ಪವಾಗಿ ಕಾಸಿ ಕೆನೆಗಟ್ಟಿಸಿದವನು ಪಂಪ, ಅದನ್ನೇ ಮಥಿಸಿ ಬೆಣ್ಣೆ ತೆಗೆದವನು ರನ್ನನ ! ಕೃತಿ ಚಿಕ್ಕದಾದರೂ ಸರ್ವಾಂಗಸುಂದರವಾಗಿ ಸರ್ವಾಲಂಕಾರ ಭೂಷಿತವಾಗಿ ನಯನಮನೋಹರವಾದ ದಿವ್ಯಾಕೃತಿಯನ್ನು ತಾಳಿ ರಾರಾಜಿಸುತ್ತಿದೆ ! ರನ್ನನ ಜಗತ್ತು ಪಂಪನಷ್ಟು ವಿಸ್ತಾರವಲ್ಲದಿದ್ದರೂ ಉಜ್ವಲವಾದುದು ! "* "ತನಗೆ ಪ್ರೇರಕವಾದ ಪಂಪಭಾರತದ

---

*ಶ್ರೀ. ಜಿ. ಬ್ರಹ್ಮಪ್ಪ: ಕವಿಚಕ್ರವರ್ತಿ ರನ್ನ, ವಿವೇಕಾಭ್ಯುದಯ ಮಂಡಲ ೨೧, ಕಿರಣ ೨, ೩

ಪಡಿಸೆಳಲಾಗದೆ ಗದಾಯುದ್ಧವು ಸ್ವತಂತ್ರಕೃತಿಯಾದುದು ಕನ್ನಡ ಸಾಹಿತ್ಯದಲ್ಲಿ ಒಂದು ಸವಾಡವೇ ಸರಿ. ಸ್ಥೂಲದೃಷ್ಟಿಗೆ ಅದರಲ್ಲಿ ಕೃತಿ ಚೌರ್ಯ, ಸೂಕ್ಷ್ಮವಿಮರ್ಶೆಗೆ ಕೃತಿರತ್ನತೋರುವುದು"*

ಗದಾಯುದ್ಧ ಕಾವ್ಯವಾದರೂ ಎಲ್ಲೆಲ್ಲೂ ನಾಟಕೀಯತೆಯಿಂದ ಕೂಡಿ ಕಂಗೊಳಿಸಿದೆ. ನಾನಾ ಪಾತ್ರಗಳ ಸಂಭಾಷಣೆಗಳನ್ನು ಪ್ರೇಕ್ಷ ರಂತೆ ನಾವು ಈ ಕಾವ್ಯದಲ್ಲಿ ಕೇಳುವೆವು. ಕೆಲವು ವೇಳೆ ಪಾತ್ರಗಳು ಕಾಣಿಸಿಕೊಂಡು ತಮ್ಮ ಹೃದಯಭಾವವನ್ನು ರಂಗಸ್ಥಳದಲ್ಲಿ ತೋಡಿಕೊಳ್ಳುವಂತೆ ಇಲ್ಲಿಯೂ ಭಾಸವಾಗದಿರದು. ರನ್ನನ ಗದಾ ಯುದ್ಧವನ್ನೇ ಅವನ ಮಾತಿನಲ್ಲೇ ಅತ್ಯುತ್ತಮ ದುರಂತ ನಾಟಕವನ್ನಾಗಿ ಶ್ರೀ. ಬಿ. ಎಂ. ಶ್ರೀಕಂಠಯ್ಯನವರು ಮಾಡಿರುವುದೇ ರನ್ನನ ನಾಟಕೀ ಯತೆಗೆ ಒಳ್ಳೆ ನಿದರ್ಶನವಾಗಿದೆ. "ಶಕ್ತಿ"ಗೆ ಎರಡನೆಯದಾಗಿ ನಾಟ ಕೀಯತೆಯಿಂದಲೇ ಅರ್ಥನ "ಶಕ್ತಿ" ಸಮನ್ವಿತವಾದ ನಾಟಕೀಯತೆ ಯಿಂದಲೇ ರನ್ನವರಕವಿ, ಚಿರಕವಿ ಮತ್ತು ಮಹಾಕವಿಯಾಗಿ ನಿಂತಿ ದಾನೆ. ನಾಟಕರೂಪದಲ್ಲಿಯೇ ಜನ್ಮಧಾರಣೆಮಾಡಲು ಕವಿಮನೋ ಗರ್ಭದಲ್ಲಿ ಹವಣಿಸುತ್ತಿದ್ದ ಗದಾಯುದ್ಧವಸ್ತುವಿನ ಮೊದಲ ಮೆಯ್ ಅನಂತರದ ಆದರ ಕಾವ್ಯರೂಪದ ಹೇರೊಡಲಲ್ಲಿ ಅಡಗಿತೇ ವಿನಾ ಅಳಿಯಲಿಲ್ಲ''÷

## ವ್ಯಾಸಮಹರ್ಷಿ ಮತ್ತು ರನ್ನ

ಸಂಸ್ಕೃತ ಮಹಾಭಾರತವನ್ನು ಬೃಹದ್ಗ್ರಂಥವಾಗಿ ನಿರೂಪಿಸಿದ ಮಹಾಕವಿಯೇ ವ್ಯಾಸಮಹರ್ಷಿ; ಈ ಕಥೆಯನ್ನು ಅಚ್ಚುಕಟ್ಟಾಗಿ ಅವರೇ ಅಳವಡಿಸಿದಾರೆ. ವ್ಯಾಸರಾದಮೇಲೆ ನೂರಾರು ಜನ ಮಹಾಭಾರತ ವನ್ನುಕಾಲಕ್ಕೆ ತಕ್ಕಂತೆಮಾರ್ಪಡಿಸಿಕೊಂಡು ನಾನಾಭಾಷೆಗಳಲ್ಲಿ ಬರೆದಿದಾರೆ

---

*ಶ್ರೀ. ರಂ. ಶ್ರೀ. ಮುಗುಳಿ: ಸಾಹಿತ್ಯ ಚರಿತ್ರೆ ಪು. ೧೧೨

÷ಶ್ರೀ. ಕೆ. ವಿ. ಪುಟ್ಟಪ್ಪ; "ಶಕ್ತಿಕವಿ" ರನ್ನ, ಪ್ರ. ಕ. ೩೧-೩, ೪. ಪು ೮

ಕನ್ನಡಭಾಷೆಯಲ್ಲಿ ಮೊಟ್ಟಮೊದಲು ಪೂರ್ಣಭಾರತವನ್ನು ಬರೆದ ಕೀರ್ತಿ ಪಂಪನದು ಅನಂತರ ದುರ್ಯೋಧನನ ಜೀವನಾಂತ್ಯವನ್ನು ರಮಣೀಯವಾ ಚಿತ್ರಿಸಿ ಕನ್ನಡನುಡಿಯಲ್ಲಿ ಹಾಡಿದ ರಸಋಷಿಯೇ ರನ್ನ. ರನ್ನನ ಕೈಸೋಂ ನಿಂದ ದುರ್ಯೋಧನನ ಪಾತ್ರದ ಘನತೆಯು ಗಗನಕ್ಕೇರಿ ರಾರಾಜಿಸಿವೆ ವ್ಯಾಸನನ್ನೂ ರನ್ನನನ್ನೂ ಅಕ್ಕಪಕ್ಕದಲ್ಲಿಟ್ಟು ನೋಡೋಣ.

## ವ್ಯಾಸ ಭಾರತ

ಕೌರವರ ಕಡೆ ಮಹಾವೀರಾಧಿವೀರರೆಲ್ಲ ಸತ್ತುಹೋದರು. ಕೊನೆಯ ದಿನ ಶಲ್ಯನೂ ಸೇನಾಪತಿಯಾಗಿ ಹೋರಾಡಿ ಮಡಿದ! "ಹೀಗೆ ಕೌರವರ ಕಡೆಯ ಹನ್ನೊಂದು ಅಕ್ಷೋಹಿಣೀ ಸೇನೆಯೂ ಸಾವಿರಾರು ರಾಜರು ಮಡಿದು ದುರ್ಯೋಧನನು ಒಬ್ಬನು ಮಾತ್ರ ಉಳಿದುಕೊಂಡನು. ಆಗ ಅವನು ತನ್ನ ಸುತ್ತಲೂ ನೋಡಲು ಎಲ್ಲವೂ ಶೂನ್ಯವಾಗಿ ಕಾಣುತ್ತಿತ್ತು; ತನ್ನಕಡೆ ಯುದ್ಧಮಾಡುತ್ತೇನೆನ್ನುವನೊಬ್ಬನೂ ಇರಲಿಲ್ಲ. ಎದುರಿಗೆ ಪಾಂಡವರು ಮಾತ್ರ ಉತ್ಸಾಹದಿಂದ ವಿಜೃಂಭಿಸುತ್ತಿದ್ದರು. ಆಗ ಅವನು ಧೈರ್ಯಗುಂದಿ ಹಿಂತೆಗೆದನು. ಇನ್ನೂ ಕೆಲವು ದಿನಗಳಕೆಳಗೆ ಹನ್ನೊಂದು ಅಕ್ಷೋಹಿಣೀ ಸೇನೆಗೆ ಒಡೆಯನಾಗಿದ್ದವನಿಗೆ ಈಗ ಅಲ್ಲಿಂದ ಹೋಗಲು ಪರಿವಾರವಿಲ್ಲ, ವಾಹನವಿಲ್ಲ, ತನ್ನ ಕುದುರೆ ಸಹ ಸತ್ತುಬಿದ್ದಿತ್ತು. ಆದ್ದರಿಂದ ತನ್ನ ಗದೆಯನ್ನು ಹೊತ್ತು, ಏಕಾಕಿಯಾಗಿ ನಡೆದುಕೊಂಡು ಪೂರ್ವಾಭಿಮುಖವಾಗಿ ಹೋಗಿ ಅಲ್ಲಿ ಒಂದು ಮಡುವಿನೊಳಗೆ ಜಲಸ್ತಂಭನ ವಿದ್ಯೆಯಿಂದ ಮುಳುಗಿಕೊಂಡಿದ್ದನು. ಇದನ್ನು ತಿಳಿದ ಸಂಜಯನು ದುರ್ಯೋಧನನನ್ನು ಹುಡುಕುತಿದ್ದ ಅಶ್ವತ್ಥಾಮ ಕೃಪ ಕೃತವರ್ಮರಿಗೆ ತಿಳಿಸಿದನು. ಅವರು ಮಡುವಿನ ಹತ್ತಿರ ಬಂದು 'ಮಹಾರಾಜ, ಏಳು ಯುದ್ಧಮಾಡು ನಾವೂ ಬರುತ್ತೇವೆ. ಗೆದ್ದರೆ ರಾಜ್ಯಲಭಿಸುತ್ತದೆ, ಇಲ್ಲದಿದ್ದರೆ ಸ್ವರ್ಗ ಲಭಿಸುತ್ತದೆ. ಅವರ ಕಡೆಯೂ ಸೇನೆಯೆಲ್ಲಾ ಬಹುವಾಗಿ ನಷ್ಟವಾಗಿದೆ. ಕಳೆದುಳಿದವರು ಗಾಯಪಡೆದಿದಾರೆ. ಆದ್ದರಿಂದ ನಾನೂ ನೀನೂ ಹೋಗಿ ಮೇಲೆ ಬಿದ್ದರೆ ಅವರು ತಡೆದು ಕೊಳ್ಳಲಾರರು!' ಎಂದು ಅವನನ್ನು ಉತ್ತೇಜನಗೊಳಿಸಿದರು. ದುರ್ಯೋಧನನು "ಇಷ್ಟು ಜನ ನಾಶವಾಗಿರುವಾಗ ನಿವು ಮೂವರಾದರೂ ಉಳಿದು

ಕೊಂಡು ಕಣ್ಣಿಗೆ ಬೀಳುತಿದ್ದೀರಲ್ಲ! ಅದೇ ಪುಣ್ಯ! ಆಗಲಿ ಯುದ್ಧ ಮಾಡಿ ಜಯಪಡೆಯೋಣ. ಈಗ ನಾನೂ ನೀವೂ ತುಂಬ ಬಳಲಿದ್ದೇವೆ. ಪಾಂಡವರು ತುಂಬ ಹುಮ್ಮಸ್ಸಿನಿಂದಿದ್ದಾರೆ. ಆದ್ದರಿಂದ ಈಗ ಯುದ್ಧ ಮಾಡಲು ನನಗೆ ಇಷ್ಟವಿಲ್ಲ. ಇದು ಪರಾಕ್ರಮ ತೋರಿಸುವ ಸಮಯ ವಲ್ಲ. ಇಂದು ಒಂದು ರಾತ್ರಿ ವಿಶ್ರಮಿಸಿಕೊಂಡು ನಾಳೆ ನಿಮ್ಮ ಜೊತೆ ಯಲ್ಲಿ ಅವರ ಮೇಲೆ ಯುದ್ಧಕ್ಕೆ ಬರುತ್ತೇನೆ.''*

ವ್ಯಾಸರ ದುರ್ಯೋಧನ ರಣಹೇಡಿಯಾಗಿದಾನೆ. ನಿರಾಶನಾಗಿ ಹಿಂಜರಿದು ತಲೆಮರೆಸಿಕೊಂಡಿದಾನೆ. ಕೃಪಾಶ್ವತ್ಥಾಮರು ಈತನನ್ನು ಹೋರಾಟಕ್ಕಾಗಿ ಪ್ರಚೋದಿಸಿ ತಾವೂ ನೆರವಾಗಿ ಬರುವುದಾಗಿ ಅಂಗಲಾ ಚಿದರೂ ಸುಯೋಧನನಲ್ಲಿ ಶೌರ್ಯ ಮತ್ತೆ ಕೆರಳಲಿಲ್ಲ. ಒಟ್ಟಿನಲ್ಲಿ ವ್ಯಾಸರ ದುರ್ಯೋಧನ ಈಗ ಹೇಡಿಯಾಗಿರುವ ನರಾಧಮನಾಗಿದ್ದಾನೆ. ರನ್ನ ಮಹಾಕವಿಯ ಸುಯೋಧನ ಎಂದೆಂದಿಗೂ ಹೇಡಿಯಾಗಲಾರ. ಒಬ್ಬ ರಾದಮೇಲೊಬ್ಬರು ಆತನನ್ನು ಸಂಧಿಗೊಡಂಬಡಿಸಲು ವಿಶ್ವಪ್ರಯತ್ನ ವೆಸಗಿ ವಿಫಲರಾಗುವರು: "ನೀಂ ಪ್ರತಿಕೂಲನ್ಯೈವನ್ಯೆ" ಎಂದು ಸಂಜಯ ನುಡಿದಾಗ ಸಾಹಸಧನ "ಸಮರಜಯಂ ದೈವಾಯತ್ತಂ, ಅದರಿನಾಪುರು ಷಾಕಾರ ಮೆಮಗಾಯ್ತೀಗಳ್, ಯಮನಂದನಾದಿಗಳೊಳೊಂದೆ ಮೆಯ್ಯೊ ಳಾಂತಿರವೆನೆನ್ನ ಛಲಮಂ ಮೆರೆವೆಂ!" (೩-೧೬) ಎಂದು ವೀರೋಚಿತ ವಾಗಿ ನುಡಿಯುತ್ತಾನೆ. ತನ್ನ ತಂದೆ ತಾಯಿಗಳು ಬಂದು ಧರ್ಮನಂದನೊ ಡನೆ ಸಂಧಿಯೆಸಗುವೆವು, ಒಡಂಬಡು ಎಂದಾಗ ಈ ಮಾನನಿಧಿ "ಸಾಧಿಸುವೆಂ ಫಲ್ಗುಣನಿಂ, ಸಾಧಿಸುವೆಂ ಪವನಸುತನ ಬಸಿರಿಂ ಹಾ ಕರ್ಣ ದುಶ್ಶಾಸನ ತೆಗೆವೆಂ!" ಎಂಬುದಾಗಿ ಸಿಂಹದಂತೆ ಗರ್ಜಿಸುವನು. ಭೀಷ್ಮರನ್ನು ಈ ಸುಯೋಧನ ಸಂಧಿಸಿದಾಗ ಅವರು ಕೂಡ ಸಂಧಿಯ ಮಾತನೆತ್ತಲು "ಸಮರದೊಳೆನಗಜ್ಜ ಪೇಳಿಮಾವುದು ಕಜ್ಜಂ!" "ಕಾದದಿರೆನಜ್ಜ.... ಇಂದಿನೊಂದೆ ಸಮರದೊಳ್ ಮೇಣಾಯ್ತು ಕೌರವಂಗವನಿತಳಂ!"

---

*ಶ್ರೀ. ಎ. ಆರ್. ಕೃಷ್ಣಶಾಸ್ತ್ರಿ: ವಚನಭಾರತ ಪು. ೩೦೫

"ಭರತಾನ್ವಯಕೆ ಕಲಂಕವಾಗದಂತಿರೆ ನೆಗಳ್ವೆಂ !" "ಬೆಸಕಯ್ವೆಂ ಬಿಡಿ ವಜ್ರಮಂಗಳಮಹಾ ಶ್ರೀ ಸಂಧಿಕಾರ್ಯಕ್ಕೆ ಲಂಘಿಸಿವೆಂ!" ಎಂದು ಸಾಹಸಧನ ಸಾಹಸಯುಕ್ತವಾಗಿ ನುಡಿದಿದ್ದಾನೆ. ವ್ಯಾಸರ ದುರ್ಯೋಧನನಾದರೋ ಆಯಾಸಗೊಂಡಿರುವೆನು, ನಾಳೆ ಯುದ್ಧಮಾಡಿದರಾಯ್ತು ಎಂದು ಪ್ರಾಣ ಭಯದಿಂದ ತತ್ತರಿಸಿ ಹೋಗಿದ್ದಾನೆ. ಕೃಪ ಅಶ್ವತ್ಥಾಮ ಕೃತವರ್ಮ ರನ್ನು ನೋಡಿ ನೀವು ಮೂವರಾದರೂ ಉಳಿದಿದೀರ ಇದು ಪುಣ್ಯವೇ ಸರಿ! ಎಂದು ಅಚ್ಚರಿಗೊಳ್ಳುತ್ತಾನೆ. ಪ್ರಾಣವುಳಿಸಿಕೊಳ್ಳುವುದೊಂದೇ ವ್ಯಾಸರ ದುರ್ಯೋಧನನ ಅಂತಿಮ ಪ್ರಯತ್ನವಾಗಿದೆ. ರನ್ನನ ದುರ್ಯೋಧನ ಮಡು ವಿನಲ್ಲಡಗಿದ್ದು ಭೀಷ್ಮರ ಮಾತಿನಿಂದಾಗಿ; ಅದೂ ಮನವಿಲ್ಲದ ಮನದಿಂದ ಮಾದಸಿದ್ಧಿ ಅಡಗಿದನೇ ವಿನ ಪ್ರಾಣಭಯದಿಂದಲ್ಲ !

## ವ್ಯಾಸ ಭಾರತ

ಮಡುವಿನಲ್ಲಿ ದುರ್ಯೋಧನ ಅಡಗಿರುವ ಸುದ್ದಿ ಪಾಂಡವರಿಗೆ ತಿಳಿದು ಅವರೆಲ್ಲ ಈ ಯೆಡೆ ಧಾವಿಸುವರು. ಧರ್ಮರಾಜನು ಕೃಷ್ಣನನ್ನು ಕುರಿತು "ಈ ಮಾಯಾವಿಯನ್ನು ನೋಡಿದೆಯಾ ? ಮಾಯಾಮಂತ್ರಗಳಿಂದ ನೀರಿ ನಲ್ಲಡಗಿ ಕೊಂಡಿದ್ದಾನೆ ! ....ಮೋಸಗಾರಿಕೆಯಲ್ಲಿ ಅವನು ಮಹಾನಿಪುಣ ಆದರೆ ಅವನನ್ನು ಕೊಲ್ಲದೆ ಬಿಡುತಕ್ಕದಲ್ಲ ! ...." ಅನಂತರ ಧರ್ಮರಾಜನು ನೀರಲ್ಲಿದ್ದ ದುರ್ಯೋಧನನನ್ನು ಕುರಿತು "ಏನಯ್ಯ, ಕ್ಷತ್ರಿಯರೆಲ್ಲರನ್ನೂ ನಿನ್ನ ಕುಲವನ್ನೂ ಕೊಲ್ಲಿಸಿ ಜೀವಗಳ್ಳನಾಗಿ ನೀರಿನಲ್ಲಡಗಿ ಕೊಂಡೆಯಾ ?.... ಎದ್ದುಬಂದು ಯುದ್ಧಮಾಡಿ, ನಮ್ಮನ್ನು ಸೋಲಿಸಿ, ರಾಜ್ಯವನ್ನು ಅನು ಭವಿಸು; ಇಲ್ಲ, ನಮ್ಮಿಂದ ಹತನಾಗಿ ಬೀಳು" ಎಂದನು ಅದಕ್ಕೆ ದುರ್ಯೋಧನ ನೀರೊಳಗಿಂದಲೇ "ಪ್ರಾಣಿಗಳಿಗೆ ಭಯವಾದರೆ ಆದೇನೂ ಆಶ್ಚರ್ಯವಲ್ಲ. ಆದರೆ ನಾನೋ ಪ್ರಾಣಕ್ಕೆ ಹೆದರಿ ಓಡಿ ಬಂದವನಲ್ಲ. .. ಎಲ್ಲವನ್ನೂ ಕಳೆದುಕೊಂಡು ಒಬ್ಬಂಟಿಗನಾಗಿ ಆಯಾಸಪಟ್ಟು ಸುಧಾರಿಸಿ ಕೊಳ್ಳೋಣವೆಂದು ಇಲ್ಲಿದ್ದೇನೆ...."ಯುಧಿಷ್ಠರ "ಗೆದ್ದು ರಾಜ್ಯವನ್ನು ಪಡೆ ಇಲ್ಲದಿದ್ದರೆ ಸತ್ತು ಸ್ವರ್ಗವನ್ನು ಪಡೆ !" ದುರ್ಯೋಧನ "ನನಗೆ ರಾಜ್ಯ

ವೇತಕ್ಕೆ ? ನನ್ನ ತಮ್ಮಂದಿರೆಲ್ಲರೂ ಹೋದರು....ಆ ರಾಜ್ಯ ನಿನಗೇ ಇರಲಿ ....ನಾನು ಕೃಷ್ಣಾಜಿನವನ್ನು ಹೊದೆದು ಕಾಡಿಗೆ ಹೋಗುತ್ತೇನೆ: ' ಧರ್ಮರಾಜ ಸೋತುಸೊರಗಿ ಅಡಗಿರುವ ದುರ್ಯೋಧನನನ್ನು ನಿಷ್ಠುರನಾಗಿ ನಿರ್ದಯೆಯಿಂದ ಪರಿಹಾಸ್ಯವೆಸಗಿದ್ದಾನೆ. ಅತ್ತ ಸುಯೋಧನ ಕಾಡಿಗೆ ಹೋಗಿ ತಪವೆಸಗುವುದಾಗಿ ಹೇಡಿತನದಿಂದಲೂ ಮಸಣ ವೈರಾಗ್ಯದಿಂದಲೂ ನುಡಿದಿದಾನೆ. ತನ್ನ ಆಗಿನ ಅವಸ್ಥೆಯನ್ನು ಪಾಂಡವರಿದಿರು ಮರ್ಯಾದೆಯಿಲ್ಲದೆ ವಿವರಿಸಿದಾನೆ. ವ್ಯಾಸರ ಧರ್ಮರಾಯ ನಿಷ್ಠುರನು. ವ್ಯಾಸರ ದುರ್ಯೋಧನ ಮಾನಮರ್ಯಾದೆಗಳಿಲ್ಲದ ಮೂರೂ ಬಿಟ್ಟವನು ! ರನ್ನಮಹಾಕವಿಯ ಧರ್ಮರಾಯ ದುರ್ಯೋಧನನನ್ನು ಕುರಿತು ಒಂದಾದರೂ ಕೆಟ್ಟ ಮಾತಾಡಿಲ್ಲ; ಪರಿಹಾಸ್ಯವೆಸಗುವ ಆಶಯ ಅವನ ಮನದಲ್ಲಿಲ್ಲ. ಜೊತೆಗೆ ದುರ್ಯೋಧನನನ್ನು ಕಂಡು ಮರುಕಪಡುತ್ತಾನೆ; ಇತ್ತ ಸುಯೋಧನ ಇಲ್ಲಿ ಹೇಡಿಯಲ್ಲ; ಮಾನನಿಧಿ ಸಾಹಸಧನ ! ಭೀಮನ ಆಟೋಪಕ್ಕೆ ಕೆರಳಿ ನೀರಲ್ಲಿದ್ದೂ ಬೆಮರಿದ ಸ್ವಾಭಿಮಾನಿ ರನ್ನನ ಮಹಾನುಭಾವನಾದ ದುರ್ಯೋಧನ !

ವ್ಯಾಸ ಭಾರತದಲ್ಲಿ ಪಾಂಡವರ ಕಡೆಯ ಅಳಿದುಳಿದ ಬಲವನ್ನೂ ಪಂಚಪಾಂಡವರನ್ನೂ ಕೊಂದು ಅಶ್ವತ್ಥಾಮ ಆ ದುರ್ಯೋಧನನಿಗೆ ತಿಳಿಸಿದಾಗ "ಆ ಮಾತನ್ನು ಕೇಳಿ ದುರ್ಯೋಧನನ ಮನಸ್ಸಿಗೆ ಸಂತೋಷವಾಯಿತು. ಸ್ವಲ್ಪ ಚೇತನಗೊಂಡು "ಭೀಷ್ಮನಾಗಲಿ, ಕರ್ಣನಾಗಲಿ ನಿಮ್ಮ ತಂದೆಯಾಗಲಿ, ನೀನು ಕೃಪ ಕೃತವರ್ಮರೂ ಇಂದು ನನಗಾಗಿ ಮಾಡಿದ್ದನ್ನೂ ಮಾಡಲಿಲ್ಲ. ಆ ನೀಚ ಸೇನಾಪತಿಯೂ, ಶಿಖಂಡಿಯೂ ಹತರಾದರಲ್ಲ, ಅದನ್ನು ಕೇಳಿ ನನಗೆ ಇಂದ್ರಪದವಿ ಬಂದಂತಾಗಿದೆ ನಿಮಗೆ ಮಂಗಳವಾಗಲಿ ! ಮತ್ತೆ ಸ್ವರ್ಗದಲ್ಲಿ ಸೇರೋಣ ! " ಎಂದು ಹೇಳಿ ಪ್ರಾಣಬಿಟ್ಟನು* ವ್ಯಾಸರ ದುರ್ಯೋಧನ ಸಾಯುವಾಗಲೂ ಪಾಪಿಷ್ಟ ಕಾರ್ಯವನ್ನು ಮೆಚ್ಚಿ ಅಶ್ವತ್ಥಾಮನನ್ನು ಕೊಂಡಾಡಿ ಸಂತೊಷದಿಂದ ಸತ್ತಿದಾನೆ. ಪಾಪಿಷ್ಟನಾಗಿ ಹುಟ್ಟಿ ಪಾಪಿಷ್ಟ

---

*ಶ್ರೀ. ಎ. ಆರ್. ಕೃಷ್ಣಶಾಸ್ತ್ರಿ: ವಚನಭಾರತ ೩೦೬–೩೦೭

ಬಾಳಿ ಕೊನೆಗೆ ಪಾಪಕಾರ್ಯದಲ್ಲೇ ಸಂತಸಗೊಂಡು ಸಾಯುವನರಾಧಮ ವ್ಯಾಸರ ದುರ್ಯೋಧನ! ಪರಪೀಡನದಲ್ಲೇ ಪರಮಾನಂದ ಹೊಂದಿ ಅಂತ್ಯದಲ್ಲಿ ಅಸಹ್ಯಕರನಾಗಿ ಸುತ್ತುರುಳುವ ದುರ್ಯೋಧನನ ಪಾತ್ರವನ್ನು ವ್ಯಾಸಮಹರ್ಷಿ ಸೃಷ್ಟಿಸಿದಾರೆ. ಇವನ ಸಾವಿಂದ ಯಾರಿಗೂ ದುಃಖವಿಲ್ಲ. ಅದಕ್ಕೆ ಬದಿಗಿಲಾಗಿ ಮಹಾಪಾಪಿ ಅಳಿದು ಇನ್ನು ಭೂದೇವಿ ಹಾಯಾಗಿರಬಹುದು ಎನ್ನುವಂತಾಗುವುದು.

ಆದರೆ ರನ್ನನ ದುರ್ಯೋಧನ ಸಾಯುವಾಗ ಪಂಚಪಾಂಡವರ ಶವಗಳನ್ನು ಅಶ್ವತ್ಥಾಮ ತಂದು ತೋರಿಸಲು "ಪರಮೇಶ್ವರಾವತಾರನೆ, ಪರಮಜ್ಞಾನಿಯೆ ವಿವೇಕವಿಕಳರವೋಲ್ ಬಾಲರ ತಲೆಯನರಿದು ತಂದೆಯೋ ದೊರಕೊಂಡದು ನಿನಗೆ ಪತಾಕಂ ಬಾಲವಧಂ!" ಎಂದು ಮಮ್ಮಲಮರುಗುತ್ತಾನೆ. ಈತನ ಸಾವನ್ನು ಕಂಡು ಎಲ್ಲರೂ ಮರುಕಪಡುವಂತೆ ಮಹಾಕವಿ ರನ್ನ ಪಾಪಿಷ್ಟನಾದ ದುರ್ಯೋಧನನನ್ನು ತನ್ನ ವಿಲಕ್ಷಣ ಕೈವಾಡದಿಂದ ಮಹಾನುಭಾವನನ್ನಾಗಿ ಮಾರ್ಪಡಿಸಿದಾನೆ. ಅವನ ಸಾವಿಗಾಗಿ ಸಹೃದಯರು ಕಂಬನಿ ಮಿಡಿಯುವಂತೆಮಾಡಿದಾನೆ.

ಸಂಸ್ಕೃತ ಸಾಹಿತ್ಯಗಣಿಯಲ್ಲಿದ್ದ ರತ್ನಗಳು ಪ್ರತಿಭಾಸಂಪನ್ನರಾದ ಕನ್ನಡಕವಿಗಳ ಕೈಲಿ ಸಿಕ್ಕಿ ಸಾಣೆಯಿಡಿಸಿಕೊಂಡೆವು. ಮೊದಲಿಗಿಂತ ಮಿಗಿಲಾಗಿ ಪ್ರಜ್ವಲಿಸಿದವು. ಸಂಸ್ಕೃತಕಾವ್ಯಗಳ ಪಾತ್ರಗಳನ್ನೂ ಸನ್ನಿವೇಶಗಳನ್ನೂ ಪಂಪನಿಂದ ಕುವೆಂಪು ತನಕ ಆಗಾಗ್ಗೆ ತಿದ್ದಿ ನಯಗೊಳಿಸಿ ನಾಜೋಕಾಗಿ ಅಳವಡಿಸುವ ಈ ಮಹಾಕಾರ್ಯ ನಡೆದುಕೊಂಡೇ ಬರುತ್ತಿವೆ. ಕನ್ನಡ ಮಹಾಕಾವ್ಯಗಳು ಸಂಸ್ಕೃತದ ಸರಳಾನುವಾದುವಲ್ಲ ಪುನರಾವರ್ತನೆಯಂತೂ ಅಲ್ಲವೇ ಅಲ್ಲ. ಆ ಕಾವ್ಯಗಳು ಕನ್ನಡಕವಿಗಳ ಕೈಸೋಂಕಿನಿಂದ ಇನ್ನೂ ಸುಶ್ರಾವ್ಯವಾದುವು."

---

+ಶ್ರೀ. ಎ. ಆರ್. ಕೃಷ್ಣಶಾಸ್ತ್ರಿ: ವಚನಭಾರತ, ಪು ೩೨೦

*ಶ್ರೀ. ಜಿ. ಬ್ರಹ್ಮಪ್ಪ: ಪಂಪನ ಕಲಿಕರ್ಣ, ಪೀಠಿಕೆ ಪು ೨೫

ಜೈನಸಾಹಿತ್ಯ ಪ್ರಚಾರಸಂಘದಲ್ಲಿ ದೊರೆಯುವ ಅಮೂಲ್ಯ ಗ್ರಂಥಗಳು

---

| | | |
|---|---|---|
| 1. | ರನ್ನನ ಅಜಿತ ಪುರಾಣ | 4-0-0 |
| 2. | ಮಧುರನ ಧರ್ಮನಾಥ ಪುರಾಣ | 2-0-0 |
| 3. | ಜನ್ನನ ಯಶೋಧರ ಚರಿತ್ರೆ | 1-0-0 |
| 4. | ಪಂಪನ ಭರತ ಬಾಹುಬಲಿ | 1-4-0 |
| 5. | ಪಂಪನ ಕಲಿಕರ್ಣ | 1-4-0 |
| 6. | ರನ್ನನ ಕುರುಕ್ಷೇತ್ರ | 1-4-0 |
| 7. | ಮುನಿಸುವ್ರತ ಕಾವ್ಯ | 2-0-0 |

ಪ್ರಕಟವಾಗುತ್ತಿರುವ ಗ್ರಂಥಗಳು:—

1. ಅಹಿಂಸಾಜ್ಯೋತಿ ಮಹಾವೀರ
2. ಜ್ವಾಲಾಮಾಲಿನೀ ಚರಿತ್ರೆ
3. ಚಾಮುಂಡರಾಯ ಪುರಾಣ

ಜೈ. ಸಾ. ಪ್ರ. ಸಂಘ,
ಶಾಂತಿನಾಥ ದೇವಾಲಯ ನ್ಯೂ ಸಯ್ಯಾಜಿರಾವ್
ರೋಡ್, ಮೈಸೂರು

*

# ರನ್ನನ ಕುರುಕ್ಷೇತ್ರ

ಎನ್ನುರಸಂ ರಕ್ಕಸಿಯನೆಲ್ಲಿ ತಂದನೋ !

———

ಕೌರವನಾಯಕರೆಲ್ಲ ಅಳಿದು ದುರ್ಯೋಧನ ಮಾತ್ರ ಒಂಟಿಯಾಗು ಳಿದು ಸಮರದಾಹದಿಂದ ಹಾತೊರೆವ ದುರಂತ ಸನ್ನಿವೇಶವನ್ನು ರನ್ನ ಮಹಾಕವಿ ರುದ್ರರಮಣೀಯವಾಗಿ ಚಿತ್ರಿಸಿದಾನೆ. ಕೌರವರನ್ನೆಲ್ಲ ಕೊಂದು ಕೂಗಿದ ಭೀಮಸೇನನ ಭಯಾನಕರೂಪವನ್ನು ಕಣ್ಣಿಗೆ ಕಟ್ಟುವಂತೆ ಕಡೆದು ನಿಲ್ಲಿಸಿದ್ದಾನೆ. ಭೀಮನ ಅದ್ಭುತಸಾಹಸವನ್ನು ಸಾಕಾರಗೊಳಿಸುವು ದಕ್ಕಾಗಿ ಮಹಾಕವಿ ಕಾವ್ಯದುದ್ದಕ್ಕೂ ನಾನಾರೀತಿಯಾಗಿ ಪ್ರಯತ್ನಿಸಿ ದಾನೆ.

ಕುರುಭೂಭೃದ್ಬಲ ತೂಲಕಾಲ ಪವನಂ ಕೌರವ್ಯಗಂಧೇಭಕೇ ।
ಸರಿ ದುಶ್ಶಾಸನ ರಕ್ತರಕ್ತವದನಂ ದುರ್ಯೋಧನೋರು ಕ್ಷಮಾ ॥
ಧರವಜ್ರಂ ಕುರುರಾಜ ರತ್ನಮಕುಟೋತ್ಕೂಟಾಂಘ್ರಿ ಸಂಘಟ್ಟ ಸಂ ।
ಗರನೆಂದೆಂದಭಿವರ್ಣಿಪೆಂ ರಣಯಶಃ ಶ್ರೀರಾಮನಂ ಭೀಮನಂ ॥

ಕೌರವಸೇನಾಸಮೂಹ ಹತ್ತಿಯರಾಶಿಯಿದ್ದಂತೆ; ಭೀಮಸೇನನಾದರೋ ಪ್ರಳಯಕಾಲದ ಬಿರುಗಾಳಿಯಂತೆ! ಕುರುವಂಶವೆಲ್ಲ ಮದದಾನೆಯ ಹಿಂಡು; ಭೀಮನಾದರೋ ಕೇಸರಕೆದರಿ ಕಿಡಿಗಾರುವ ಸಿಂಹ! ದುಶ್ಶಾಸನನ ರಕ್ತವನ್ನು ಹೀರಿ ಹೀರಿ ವಾಯುಪುತ್ರನ ಮುಖವೆಲ್ಲ ಕೆಂಪಾಗಿ ಹೋಗಿದೆ ! ದುರ್ಯೋ ಧನನ ತೊಡೆಗಳು ಪರ್ವತದಂತೆ ದೃಢವಾಗಿದ್ದರೂ ಭೀಮಸೇನ ವಜ್ರಾ ಯುಧ ! ಸುಯೋಧನನ ರತ್ನಕಿರೀಟಾಗ್ರವನ್ನು ತೊತ್ತಳದುಳಿವುದಾಗಿ ಪ್ರತಿಜ್ಞೆತೊಟ್ಟಿದ್ದಾನೆ ರಣಯಶಃ ಶ್ರೀರಾಮನಾದ ಭೀಮಸೇನ ! "ಕುರುಕ್ಷೇತ್ರದೊಳ್ ಪ್ರಳಯೋಗ್ರಾಂತಕನಂತಗುರ್ವನೊಳಕೊಂಡಿರ್ದಂ ಹಿಡಿಂಬಾಂತಕಂ ! "

ಕುರುಕ್ಷೇತ್ರದಲ್ಲಿ ಪ್ರಳಯಕಾಲದ ಉಗ್ರಜನನಂತೆ ಭಯಂಕರಾಕಾರನಾಗಿ ಹಿಂಡಿಂಬಾಂತಕ ಉಮ್ಮಳಿಸಿದನಂತೆ. ಸಂದರ್ಭಕ್ಕೆ ಒಪ್ಪುವಂತೆ ರೌದ್ರತೆಯನ್ನು ಕಣ್ಣಿಗೆ ಕಟ್ಟುವಂತಹ ಚಿತ್ರವನ್ನು ಮಹಾಕವಿ ನಮ್ಮ ಮುಂದಿಟ್ಟಿದಾನೆ.

ದ್ರೌಪದಿಗೆ ಸಂಧಿ ಮತ್ತೆ ಎಲ್ಲಿ ನಡೆದೀತೋ ಎಂಬ ಸಂದೇಹ. ಉಳಿದಿರುವ ದುರ್ಯೋಧನನ್ನೂ ಕೊಲ್ಲಿಸುವತನಕ ಆಕೆಗೆ ನೆಮ್ಮದಿಯಿಲ್ಲ. ತಮ್ಮ ಎಲ್ಲ ನೋವಿಗೂ ದುರ್ಯೋಧನನೇ ಕಾರಣನೆಂದು ಆಕೆ ಸದಾ ಸಿಡಿ ಮಿಡಿಗೊಳ್ಳುತ್ತಾಳೆ. ಹೆಚ್ಚೇನು ಕುರುಕ್ಷೇತ್ರಕ್ಕೆ ಪ್ರಚೋದನಾಶಕ್ತಿಯೆಂದರೆ ಅವತಾರಪುರುಷನಾದ ಕೃಷ್ಣನಲ್ಲ ಅಂದು ಸಂಭಾಂಗಣದಲ್ಲಿ ಅವಮಾನಿತಳಾದ ಪಾಂಚಾಲರಾಜಕನ್ಯೆ ಎಂದರೆ ತಪ್ಪಾಗದು. ಭೀಮನನ್ನು ಉಬ್ಬಿಸಿ ದುರ್ಯೋಧನನನ್ನು ಕೊಲ್ಲಿಸಲು ದ್ರೌಪದಿ ಬರುವ ಸಂದರ್ಭವನ್ನು ರನ್ನಮಹಾಕವಿ ಕಲಾಯುಕ್ತವಾಗಿ ನಿರೂಪಿಸಿದಾನೆ. "ದೇವಾಸುರರ ಯುದ್ಧಕ್ಕೆ ಕರಗವನ್ನು ಹೊತ್ತು ಧಾವಿಸುವಂತೆ ಭೀಮನೆಡೆ ದ್ರೌಪದಿ ಬರುತ್ತಿದ್ದಾಳೆ. ಸದಾ ಕಣ್ಣೀರು ಕಾಲುವೆಗಟ್ಟಿ ಆಕೆಯ ಮುಖದಲ್ಲಿ ಹರಿಯುತ್ತಿದೆ; ಅಸಹ್ಯವಾದ ಪರಿಭವದಿಂದ ದಹಿಸಿ ಸೊರಗಿದ್ದಾಳೆ; ಯಜ್ಞಕೂಪದಲ್ಲಿ ಜನಿಸಿ ದ್ರುಪದರಾಜನ ಉದ್ಯಾನದ ಜಯಪತಾಕೆಯಂತೆ ಕಂಗೊಳಿಸಿದ ದ್ರೌಪದಿ ವಾಯುಪುತ್ರನೆಡೆ ಡಾಮರಡಾಕಿನಿಯಾಗೆ ಧಾವಿಸಿದಳು." "ಸಂಧಿಗಾಗಿ ಕೃಷ್ಣ ವಿಶ್ವಪ್ರಯತ್ನ ನಡೆಸಿದ; ಆದರೂ ನನ್ನ ನಿನ್ನ ಪುಣ್ಯದಿಂದ ಸಂಧಾನ ಭಗ್ನವಾಯಿತು. ದುರ್ಯೋಧನನೊಬ್ಬನುಳಿದೆಲ್ಲ ಕೌರವರೂ ನಿರ್ನಾಮವಾದರು. ಭೀಷ್ಮ ಧೃತರಾಷ್ಟ್ರರು ಕಲೆತು ಧರ್ಮರಾಯನನ್ನು ಸಂಧಿಗೊಡಂಬಡಿಸಿದರೇನು ಗತಿ ! ಈ ಸಂಶಯವನ್ನು ನಿವಾರಿಸು ದುಃಶ್ಶಾಸನನ ರಕ್ತವನ್ನು ಹೀರಿದ ಮೇಲೆ ನಿನ್ನ ಕೋಪವೂ ನಂದಿ ಹೋದಂತಿದೆ!"

ಸಮವಾಯುನುಹಿತರೊಳ್ ಸಂ।
ಧಿಮಾಡಿ ಯಮಸೂನುಪೇಳೆ ವನವಾಸವೆ ದಲ್ ॥
ನಿಮಗೆ ಶರಶ್ಶೆನಗಮಂದ।
ಗ್ನಿಮುಖವೆ ಪುಟ್ಟಿದುದರಿಂವೆ ಶರಣಾಗ್ನಿಮುಖಂ ॥

ಮತ್ತೆ ಶತ್ರುಗಳೊಡನೆ ಹೋಂಟಿ ಬಾಳಬಹುದೆ? ಅವರೊಡನೆ ಸಂಧಿ ಗೊಡಂಬಡಬಹುದೆ; ಧರ್ಮರಾಯನೇನಾದರೂ ಇಂತೆ ಸ.ಗಿ ದರೆ ನಿಮಗೆಲ್ಲ ವನವಾಸವೆ ಗತಿ; ಹಿಂದೆ ನಾನೇನೋ ಮರುಮಾತಾಡದೆ ನಿಮ್ಮನ್ನೆಲ್ಲ ಹಿಂಬಾಲಿಸಿದೆ; ಆದರೆ ಈಗ ಮಾತ್ರ ಸಂಧಿಯಾಗುವುದಾದರೆ ಖಂಡಿತ ಅಗ್ನಿಪ್ರವೇಶಮಾಡುತ್ತೇನೆಯೆ ಹೊರತು ನಿಮ್ಮ ಹಿಂಬಾಲಕಳಾಗ ಲಾರೆ; ಅಗ್ನಿಯಿಂದಲೇ ಹುಟ್ಟಿದ ನಾನು ಇಂತೆಸಗಲು ಹಿಂಜರಿಯಲಾರೆ:— ಈ ಮಾತುಗಳನ್ನು ಕೇಳಿ ಭೀಮ ನಸುನಕ್ಕು, ಆಕೆ ಅನುಭವಿಸಿದ ಚಿತ್ರ ಹಿಂಸೆಯನ್ನೆಲ್ಲಾ ನೆನಪಿಗೆತಂದುಕೊಂಡು ಆಕೆಗಾಗಿ ಮರುಕಪಡುವನು.

ಕುರುರಾಜಾನುಜ ಭೀಕರ ।
ಕರವಿಲುಳಿತ ನೀಲಕಬರಿ ಭರಮಂ ಪಿಡಿದಂ ॥
ಪರಿಭವಿಸಲ್ ಕೃಷ್ಣೆಗೆ ಮಿಗೆ ॥
ದೊರೆಕೊಳಿಸದೆ ಕೋಪಮಂ ಮನಸ್ತಾಪಮುಮಂ ॥

"ಅಂದು ದುಶ್ಯಾಸನ ತನ್ನ ಭೀಕರವಾದ ಕೈಗಳಿಂದ ಈಕೆಯ ತಲೆ ಗೂದಲನ್ನು ಕಿತ್ತುತಿರುಚಿದ! ಸಭಾಭವನದಲ್ಲಿ ಪುರುಷರಿದಿರು ಅಪ ಮಾನಗೊಳಿಸಿದ! ಅದರಿಂದ ಅವರ ಮೇಲೆ ಕೋಪಗೊಳ್ಳದಿರಲು ಸಾಧ್ಯವೆ! ಮನಸ್ತಾಪ ತೋರದೆ ಹೇಗಿದ್ದಾಳು!"

ಧಾತ್ರಿಯುಮನೀ ಹುತಾಶನ ।
ಪುತ್ರಿಯುಮಂ ಬರಿದೆ ಸೋಲ್ತನಲ್ಲಂ ಜೂದಿಂ ॥
ಕ್ಷತ್ರಿಯ ತೇಜಮುಮಂ ಯಮ ।
ಪುತ್ರಂ ರಿಪುಗಂದೆ ಸೋಲ್ತನಾಗಲೆ ವೇಡಾ ॥

ನಮ್ಮಣ್ಣ ಭೂಮಿಯನ್ನೆಲ್ಲ ಸೋತ; ಅಗ್ನಿಪುತ್ರಿಯನ್ನೂ ಕಳಕೊಂಡ; ಇಷ್ಟೂ ಅಲ್ಲದೆ ತನ್ನ ಕ್ಷಾತ್ರತೇಜಸ್ಸನ್ನೂ ಜೂಜಿನಲ್ಲಿ ಈ ಮಹಾರಾಯ ಸೋತಿರಬೇಕು!" ಇಲ್ಲಿ ಭೀಮನ ಮನಸ್ಸು ಅಸಹ್ಯ ವೇದನೆಯನ್ನನು ಭವಿಸಿದೆ. ಪತ್ನಿಯ ಸೀರೆಯನ್ನು ದುಶ್ಯಾಸನ ಸೆಳೆದಾಗಲೂ ತಾವೆಲ್ಲ ಸುಮ್ಮನಿದ್ದುದಕ್ಕಾಗಿ ಇಂದು ಪಶ್ಚಾತ್ತಾಪಪಡುತ್ತಿದ್ದಾನೆ. ಅಣ್ಣನ ಮೇಲಿನ ಗೌರವಕ್ಕಾಗಿ ತಾವು ಅಂತೆಸಗಿದ್ದು ಲೋಕವ್ಯವಹಾರಕ್ಕೆ ವಿರುದ್ಧ

ವಾದುದೆಂದು ಚಿಂತಿಸುತ್ತಾನೆ. ಜೂಜಾಡಿದ ಪ್ರಸಂಗ ಕಣ್ಣಿಗೆ ಕಟ್ಟಿದೆ; ದುಶ್ಶಾಸನ ದ್ರೌಪದಿಯನ್ನು ಹಿಡಿದೆಳೆದಾಡಿದ ಅಮಾನುಷ ಕೃತ್ಯವು ಎಂದೆಂದಿಗೂ ಮರೆಯಲಾರದಂತಹ ನೆನೆಪಾಗಿ ನಿಂತಿದೆ. "ಆ ಸಂದರ್ಭ ದಲ್ಲಿ ನಮಗೇನಾದರೂ ಮೂರ್ಛೆ ಬಂದಿರುಬಹುದೆ ? ಅಥವ ಶತ್ರುಗಳ ವಶೀಕರಣಕ್ಕೆ ತುತ್ತಾಗಿದ್ದಿರಬಹುದೆ ? ದ್ರೌಪದಿಗಾದ ಮಾನಭಂಗವನ್ನು ಒಂದೆಡೆ ಭೀಮ ಮತ್ತೊಂದೆಡೆ ಲೋಕೈಕವೀರನಾದ ಅರ್ಜುನ ಹೇಗೆ ಸಹಿಸಿ ದೆವು ? ವಿನಯವನ್ನು ತೋರುವ ನೆಪದಿಂದ ಹೆಂಡತಿಗಾದ ಅಪಮಾನಕ್ಕೆ ಸೇಡು ಬಗೆಯದೆ ಹೋದೆವಲ್ಲ; ಅಣ್ಣನ ಸತ್ಯಸಂಧತೆ ಎಂಬ ಸಂಮ್ಮೋಹನ ಶಕ್ತಿ ನನ್ನನ್ನೂ, ನರನನ್ನು ಮರಳುಮಾಡಿತೆ !" ಎಂದು ಹಿಂದಾದುದ ಕ್ಕಾಗಿ ಪರಿತಪಿಸಿ ಪಾಂಚಾಲಿಯನೊಮ್ಮೆ ನೋಡುತ್ತಾನೆ. ಕುರುಕುಲ ವಿಲಯಜ್ವಾಲೆ ಸುಯೋಧನನ ಪ್ರಳಯಕಾಲಿ" ಯಾಗಿ ಪಾಂಚಾಲೆ ಕೋಪ ದಿಂದ ಉರಿಯುತ್ತಿದ್ದಾಳೆ, ಈಕೆಯನ್ನು ನೋಡಿದಾಕ್ಷಣ ಭೀಮ ಹಿಂದು ಮುಂದನ್ನೆಲ್ಲಾ ಮರೆಯುತ್ತಾನೆ. ಆಕೆಯ ಹೃದಯದ ಸಂತಾಪವನ್ನು ನೀಗುವುದಕ್ಕಾಗಿ ಯಾವ ಲೋಕವನ್ನು ಬೇಕಾದರೂ ದಹಿಸಲು ಸಿದ್ಧನಾಗು ವನು.

ಗಳಿಯಿಸುತಿರೆ ಕಬರಿಭರಂ !
ಗಳಿಯಿಸುತಿರೆ ನಯನವಾರಿ ನಿನ್ನಾನದಿಂ ॥
ನಳಿನಾನನೆ ನೀನಿರೆ ಕುರು ॥
ಕುಲಾಂತಕಂ ಗಳಿತ ಕೋಪನೆ ಈ ಭೀಮಂ ॥

ನಿನ್ನ ತಲೆಕೂದಲು ಬಿಚ್ಚಿ ಬಿರಿಹೊಯ್ದು ಜೋಲು ಬಿದ್ದಿರುವಾಗ, ನಿನ್ನಕಂಗಳಿಂದ ಕಣ್ಣೀರು ಕಾಲುವೆಗಟ್ಟಿ ಹರಿಯುತ್ತಿರುವಾಗ ನಳಿನಾನನೆ ಯಾದ ನೀನು ನನ್ನಿದಿರಿರುವಾಗ ಈ ಭೀಮಸೇನ ಕೋಪವನ್ನುಳಿದು ಸಮಾಧಾನ ಚಿತ್ತನಾಗಿರಬಲ್ಲನೆ.

ನೀನಗ್ನಿಪುತ್ರಿಯಯ್ ಸವ ।
ಮಾನ ತನೂಭವನೆನಾನಣಂ ಕೂಡಿರೆ ಸಂ ॥
ಧಾನ ಮಿನ್ನಪರೊಳೆಂತವ ।
ಲಾನಿಲ ಸಂಯೋಗ ಮುರಿಪದಿರ್ಕುಮೆ ಪಗೆಯುಂ ॥

ಕುರುನಂದರಂ ಕೊಂದೆಂ ।
ಕುರುಶಾಬಾನುಜರ ನೆತ್ತರಂ ಕುಡಿದೆಂ ಪ್ರೂ ॥
ಣ್ದರಡಂ ತೀರ್ಚಿದೆ ನಿರ್ದಪ ।
ವೆರಡನುವಂ ತೀರ್ಚಿ ತೀರ್ಚದಿರ್ಪನೆ ಪಗೆಯಂ ॥

"ನೀನೊ ಬೆಂಕಿಯಮಗಳು; ನಾನಾದರೋ ಗಾಳಿಯ ಮಗ; ನೀನೂ ನಾನೂ ಒಂದಾಗಿರುವಾಗ ಶತ್ರುಗಳೊಡನೆ ಹೇಗೆ ಸಂಧಿಕಾರ್ಯ ನಡೆದೀತು; ಬೆಂಕಿ ಉರಿದೆದ್ದಾಗ ಬಿರುಗಾಳಿ ಬೀಸಿದಾಗ ಶತ್ರುಗಳ ಸರ್ವನಾಶ ಶತಸಿದ್ಧವಲ್ಲವೆ?"

"ಕುರುನಂದರನ್ನೆಲ್ಲಾ ಕೊಂದಿದೇನೆ; ನಿನಗೆ ಅಪಮಾನಗೊಳಿಸಿದ ದುಶ್ಶಾಸನನ ಬಿಸಿನೆತ್ತರನ್ನು ಬಸಿದಿದ್ದೇನೆ; ಮಾಡಿದ ಪ್ರತಿಜ್ಞೆಗಳಲ್ಲಿ ಎರಡನ್ನು ಪೂರೈಸಿರುವೆನು; ದುರ್ಯೋಧನನ ತೊಡೆ ಮುರಿವುದು ಆತನ ಕಿರೀಟವನ್ನು ತುಳಿದು ನುಚ್ಚುನೂರುಮಾಡುವುದೆಂಬ ಎರಡು ಪ್ರತಿಜ್ಞೆಮಾತ್ರ ಉಳಿದಿವೆ. ಅವನ್ನೂ ಪೂರೈಸುವೆನು.

ಅರಸನಮಗಂ ಪ್ರಾರ್ಥಿಸೆ ಬಾಂ ।
ದೊರೆಯಮಗಂ ಮಾಡೆ ಸಂಧಿಯಾದಪ್ಪುದೆನುತುಂ ॥
ಮರುಗುವೆ ಅಣ್ಣನ ಮಾತಂ ।
ಪೆರಗಿಕ್ಕುವೆನಜ್ಜನಿರ್ದು ಮಾಣ್ಬೊಡಮಿಾಯೆಂ ॥

"ಧರ್ಮರಾಯ ಪ್ರಾರ್ಥಿಸಬಹುದು; ಭೀಷ್ಮಾಚಾರ್ಯ ಸಂಧಿಗೇರ್ಪಾಡುಮಾಡಬಹುದು; ಇನೇತಾನೆ ನಿನ್ನ ಸಂದೇಹ; ಇದಕ್ಕೇಕೆ ಚಿಂತಿಸುತ್ತಿ; ಇಂದು ಅಣ್ಣನ ಮಾತನ್ನೂ ಮಿಾರುತ್ತೇನೆ; ಅಜ್ಜನ ಏರ್ಪಾಟನ್ನೂ ಆಗುಗೊಡುವುದಿಲ್ಲ" ಈ ಮಾತುಗಳಲ್ಲಿ ಜೀವಕಳೆ ತುಂಬಿದೆ. ಹಿಂದೆ ಸಭೆಯಲ್ಲಿ ತಾನೂ ಸುಮ್ಮನಿದ್ದುದಕ್ಕಾಗಿ ಇಂದು ಭೀಮ ಮರುಗಿ ಹಿಂದಿನಂತಿರದೆ ತೊಡರುಗಳನ್ನೆಲ್ಲಾ ಕಿತ್ತೊಗೆದು ದ್ರೌಪದಿಯ ಮನಕ್ಕೆ ನೆಮ್ಮದಿಗೈಯುವುದಾಗಿ ಪ್ರತಿಜ್ಞೆತೊಡುವುದು ಧ್ವನಿಪೂರ್ಣವಾಗಿದೆ. ಒನ್ನೊಂದುಮಾತು ಸಿಡಿಲಮರಿಯಾಗಿ ಮಿಂಚಿ ವಾಚಕರನ್ನು ಬೆರಗುಗೊಳಿಸದಿರಸಲಾರದು. ಕುರುಕ್ಷೇತ್ರದ ರುದ್ರರಮಣೀಯ ದೃಶ್ಯವನ್ನು ಕಾಣುವ ಸಲುವಾಗಿ ಪ್ರತಿ

ಯೆಂಬ ಸಹೃದಯನೂ ದ್ವಾಪರಯುಗಕ್ಕೆ ಧಾವಿಸಿದಿರಲಾರ. ಕಾಲ ಚಕ್ರವನ್ನು ಮತ್ತೊಮ್ಮೆ ಹಿಂದಕ್ಕೆ ಸರಿಸಿ ಕುರುಕ್ಷೇತ್ರದ ದಾರುಣಮಯ ಸನ್ನಿವೇಶಕ್ಕೆ ಮಹಾಕವಿ ತನ್ನ ಪ್ರತಿಭಾಶಕ್ತಿಯಿಂದ ವಾಚಕರನ್ನೆಲ್ಲ ಸೆಳೆದಿದ್ದಾನೆ.

ಭೀಮನ ಮಾತನ್ನು ಕೇಳಿ ಪಾಂಚಾಲಿಗೆ ಸಂದೇಹ ಪರಿಹಾರವಾಯಿತು. ಭೀಮನ ಶಕ್ತಿಯಲ್ಲಿ ಆಕೆಗೆ ಪೂರ್ಣವಿಶ್ವಾಸವಿದೆ. ಹೆಚ್ಚೇನು? ತಾನು ನೊಂದಾಗೆಲ್ಲ ಮರುಕದಿಂದ ನೋಡಿದವನೆಂದರೆ ಭೀಮಸೇನನೊಬ್ಬನೆ. ತಾನು ಅಪಮಾನಗೊಂಡಾಗಲೆಲ್ಲ ಉರಿದಿದ್ದವನೂ ಭೀಮನೇ. ಕೀಚಕರನ್ನೆಲ್ಲ ಧ್ವಂಸಮಾಡಿ ದ್ರೌಪದಿಗೆ ಸಮಾಧಾನವೆಸಗಿದವನೂ ಭೀಮಸೇನನೇ ತಾನೆ! ಆತನನ್ನು ಮನಸಾರೆ ಮೆಚ್ಚಿ ಕುರುಕ್ಷೇತ್ರದ ಚಾಲಕ ಶಕ್ತಿಯಾದ ದ್ರೌಪದಿ ಹೊಗಳಿಕೆಯ ಹೊಳೆಯನ್ನೇ ಹರಿಸುತ್ತಾಳೆ.

ಇರಿವಬೆಡಂಗ ದೇವಪರಮೇಶ್ವರ ಸಾಹಸಭೀಮ ನಿನ್ನೊಳಾ ।
ಇರಿದು ಬರ್ದುಂಕುವರ್ ನಿಜಭುಜೋಗ್ರ ಗದಾಪರಿಘಪ್ರಹಾರದಿಂ ॥
ಪಿನರಿಯಾಗಿ ಪುಣ್ಮ್ರವೆಣನಾಗಿ ಮರುಳ್ಗೂಣಿಸಾಗಿ ಯುದ್ಧದೊಳ್ ।
ಕುರಿದರಿಯಾಗಿ ಬಿಳ್ದರಿಬಲಂಗಳೆ ಪೇಳವೆ ನಿನ್ನ ಬೀರಮಂ ।

ಭೀಮ, ನೀನೆ ಇರಿವ ಬೆಡಂಗ; ನೀನೇ ದೇವರು; ನೀನೇ ಪರಮೇಶ್ವರ, ನಿನ್ನೊಡನೆ ಹೋರಾಡಿ ಯಾರು ತಾನೆ ಬದುಕುತ್ತಾರೆ; ನಿನ್ನ ಗದೆಯ ಪೆಟ್ಟಿಗೆ ಸಿಕ್ಕಿ ಶತ್ರುಗಳು ನುಚ್ಚುನೂರಾದರು; ಅವರ ದೇಹವೆಲ್ಲ ನಜ್ಜುಗುಜ್ಜಾಯಿತು; ಅವರ ಶವಗಳೆಲ್ಲ ಭೂತಪ್ರೇತಗಳಿಗೆ ಊಣಿಸಾಯಿತು; ಎಲ್ಲರೂ ಕುರಿಗಳಂತೆ ಕತ್ತರಿಸಿಹೋದರು; ನಿನ್ನ ಪರಾಕ್ರಮಕ್ಕೆ ಇವುಗಳಲ್ಲೊಂದೊಂದು ಸಾಕ್ಷಿಯಾಗಿವೆ:

ಮಣಿಕನಕಂ ವಸ್ತ್ರ ವಿಭೂ ।
ಷಣಂಗಳಂ ಕೊಟ್ಟು ಪೆರಡಿರೊಲ್ವರೆ ಗಂಡರ್ ॥
ಗುಣಮನೆ ಮೆರೆವುದು ಶಸ್ತ್ರ ।
ವ್ರಣಮುಂ ನಿನ್ನಂತೆ ಮೆರೆವುದಿರಿವಬೆಡಂಗ ॥

ಬಂಗಾರಕ್ಕಾಗಲಿ ರತ್ನಕ್ಕಾಗಲಿ ಹೆಣ್ಣು ಒಲಿವಾಳೆ! ಗಂಡ ತನ್ನ ಸದ್ಗುಣಗಳನ್ನು ತೋರಿದಾಗ, ರಣರಂಗದಲ್ಲಿ ಹೋರಾಡಿ ಮೈಯೆಲ್ಲ ವ್ರಣಮಾಡಿಕೊಂಡು ಹಿಂಜರಿಯದೆ ಮೆರೆದಾಗ ನಿಜವಾಗಿಯೂ ಮಡದಿ ಆತನಿಗೆ ಮನಸೋಲುತ್ತಾಳೆ. ನೀನು ಅಂತೆಯೇ ನನ್ನ ಮನವನ್ನು ಸೂರೆಗೊಂಡಿರುವೆ” ಈ ಮಾತುಗಳೆಲ್ಲ ಅಗ್ನಿಪುತ್ರಿಯ ಬಾಯಿಂದ ಬರ ತಕ್ಕುದೇ.! ಆಕೆಯ ಕ್ಷಾತ್ರವೀರ್ಯ ಕೆದರಿ ಇಂತು ನುಡಿಸಿದೆ. ಆಕೆಯ ಹೃದಯ ಜ್ವಾಲೆಯ ಬೆಳಕಿನಲ್ಲಿ ರನ್ನಮಹಾಕವಿ ರುದ್ರರಮಣೀಯ ವಾದ ಕುರುಕ್ಷೇತ್ರವನ್ನು ನಮಗೆಲ್ಲ ಕಾಣುವಂತೆಮಾಡಿದಾನೆ. ಆಕೆಯ ಪಾತ್ರ ಸಜೀವವಾಗಿ ಚಿತ್ರಿತವಾಗಿದೆ. ಆಕೆಯ ಹೃದಯಾಂತರಾಳದ ರಜೋ ಗುಣ ಸಾಕಾರಗೊಂಡು ನಿಂತಿರುವುದನ್ನು ಕಲಾಯುಕ್ತವಾಗಿ ಸೃಷ್ಟಿಸಿ ದಾನೆ. ಆ ಸಂದರ್ಭವನ್ನು ಕಣ್ಣಾರೆನೋಡಿದ ವಿದೂಷಕ ತನ್ನ ಮನ ದಲ್ಲಾದ ಪರಿಣಾಮವನ್ನು ಬಾಯಾರೆ ನುಡಿದಿದ್ದಾನೆ.

ಕುರುಕುಲಮಂ ನುಂಗಿದೆಯು
ಳ್ಳುರೆಬರಮಂ ನುಂಗಲಿರ್ದೆ ಕುರುಪತಿಯುಮನ ||
ಣ್ಣೆರಡನೆಯ ಹಿಡಂಬಿಯನೆ |
ಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ ||

“ಕುರುಕುಲವನ್ನೆಲ್ಲ ನುಂಗಿದೆ; ಉಳಿದಿರುವವನ್ನೂ ತಿಂದತೇಗಲು ಹಾತೊರೆಯುತ್ತಿರುವೆ; ಕುರುರಾಜನನ್ನೂ ನುಂಗುವ ಆತುರದಲ್ಲಿರುವೆ ಎರಡನೆ ಹಿಡಂಬಿಯಾದ ನಿನ್ನನ್ನು ನಮ್ಮರಸ ಎಲ್ಲಿಂದ ತಂದನೊ” ಇದು ವಿದೂಷಕನ ಮೆಚ್ಚಿಗೆ; ಪರಿಹಾಸದಲ್ಲೇ ಪೂರ್ಣಚಿತ್ರವನ್ನು ಅದ್ವಿತೀಯ ನಾದ ರನ್ನ ಮೂಡುವಂತೆ ಮಾಡಿದಾನೆ. ದ್ರೌಪದಿಯ ಪಾತ್ರವನ್ನು ಪರಿ ಣಾಮಕಾರಿಯಾಗಿ ಚಿತ್ರಿಸಿದಾನೆ.

ದ್ರೌಪದಿಯೇ ಕುರುಕ್ಷೇತ್ರಕ್ಕೆ ಕಾರಣ. ಅಷ್ಟೇನು ಕೃಷ್ಣನಮೇಲೂ ತನ್ನ ಪ್ರಭಾವನ್ನು ಬೀರುವಂತಹ ಅದ್ಭುತಶಕ್ತಿ ಪಾಂಚಾಲ ರಾಜಕನ್ಯೆ! ಕೃಷ್ಣನನ್ನು ಸಂಧಿಸಿ “ಏನಾದಾರೂಮಾಡಿ ಯುದ್ಧ ನಡೆವಂತೆ ಏರ್ಪಡಿಸು” ಎಂದು ಈಕೆ ಬೆಸಗೊಂಡ ಸಂದರ್ಭವನ್ನು ನೆನೆಯದ ಹೊರತು ಈಕೆಯ

ಪಾತ್ರದ ಪರಿಚಯ ನಮಗಾಗಲಾರದು. ಈಕೆ ಇಲ್ಲದೆ ಹೋಗಿದ್ದರೆ, ಅಥವ ಈಕೆಯೂ ಸಹನಶೀಲೆಯಾಗಿ ಕ್ಷಮಾಶೀಲಳಾಗಿ ವರ್ತಿಸಿದ್ದರೆ ಕೃಷ್ಣ ಭಗವದ್ಗೀತೆಯನ್ನು ಬಿಚ್ಚದೆ ಹಿಂದಿರುಗಬೇಕಾಗಿತ್ತು. ಪಾಂಡವರಲ್ಲಿ ಮತ್ತೆ ಮತ್ತೆ ಸಾಹಸವನ್ನು ಪುಟಗೊಳ್ಳುವಂತೆ ಪ್ರಚೋದಿಸಿದಾಕೆಯೇ ದ್ರೌಪದಿ ಹೆಚ್ಚೇನು ಈಕೆಯ ಸೂಚನೆಗನುಸಾರವಾಗಿ ರಣರಂಗ ಪ್ರಾರಂಭವಾಯಿತು. ಅಂತೆ ಈಕೆಯು ಇಷ್ಟಪ್ರಕಾರ ಮುಕ್ತಾಯಗೊಂಡಿತು. "ಈ ಸಂದರ್ಭದಲ್ಲಿ ಪಂಪಭಾರತದತ್ತ ಹೊರಳಿದರೆ ದ್ರೌಪದಿಯ ಪರಿಚಯ ಇನ್ನೂ ಚೆನ್ನಾಗಿ ಮನದಟ್ಟಾಗುವುದು. ದುಶ್ಶಾಸನನನ್ನು ಕೊಂದು ಆತನ ಕರುಳ ಮಾಲೆಯನ್ನು ದ್ರೌಪದಿಗೆ ಮುಡಿಸಿ ಭೀಮಸೇನ ಆಕೆಯ ಪಾತ್ರದಹಿರಿಮೆಯನ್ನು ಸಾರುತ್ತಾನೆ.

ಇದರೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ |
ಪುದಿದಳ್ಕಾಡಿತ್ತಡಂಗಿತ್ತದರೊಳೆ ಕುರುರಾಜನ್ವಯಂ ಮತ್ಪ್ರತಾಪ ||
ಕ್ಕಿದರಿಂದಂ ನೋಡೆಗುರ್ವುರ್ವಿದುದಿದುವೆ ಮಹಾಭಾರತಕ್ಕಾದಿಯಾಯ್ತು |
ಬ್ಜದಳಾಕ್ಷೀ ಪೇಳ ಸಾಮಾನ್ಯಮೆ ಬಗೆಯ ಭವತ್ಕೇಶ ಪಾಶಪ್ರಪಂಚಂ ||*

ಕಮಲಾಕ್ಷಿಯೆ ! ನಿನ್ನ ಕೇಶಪಾಶಪ್ರಪಂಚದಲ್ಲಿ ಬೆಳ್ಗೊಡೆಯೊಡನೆ ಕೂಡಿದ ಭೂಗೋಳವೇ ಮಿಂದು ಮಿಲಿ ಮಿಲಿ ಒದ್ದಾಡಿದೆ ! ಕುರುವಂಶವೆಲ್ಲ ಈ ಕೂದಲರಾಶಿಯಲ್ಲಿ ಹೂಳಿಹೋಗಿದೆ ! ನನ್ನ ಪ್ರತಾಪಕ್ಕೂ ಬಿಚ್ಚಿ ಬಿರಿಹೊಯ್ದ ನಿನ್ನತಲೆಗೂದಲೆ ಉಗಮ ! ಈ ಕೂದಲೇ ಕುರುಕ್ಷೇತ್ರವನ್ನು ರಕ್ತದ ಮಡುವಿನಲ್ಲಿ ಮುಳುಗಿಸಿದ್ದೂ ಕೂಡ ! ನಿನ್ನ ಕೇಶಪಾಶ ಪ್ರಪಂಚ ಸಾಮಾನ್ಯವಾದದುದೇ ! ದ್ರೌಪದಿಯನ್ನು ಕಂಡು ಭೀಮಸೇನ ಇಂತು ಮೆಚ್ಚಿದಾನೆ. ಭೀಮನಿಗೆ ಆಕೆಯ ಒಳಗೂ ಹೊರಗೂ ಪರಿಚಯವಿದೆ: ಅಂತೆ ಆಕೆಗೂ ಈತನ ಪರಿಚಯವಿದೆ. ಇಬ್ಬರೂ ರಜೋಗುಣಯುಕ್ತರಾಗಿ ರಾರಾಜಿಸಿದ್ದಾರೆ. ಇವರಿಬ್ಬರ ಕೋಪಾನಲವೇ ಒಂದಕ್ಕೊಂದು ಪೂರಕವಾಗಿ ಕುರುಕ್ಷೇತ್ರವನ್ನು ಮಾಡಿತು. ಇಬ್ಬರೂ ಪ್ರತೀಕಾರದಿಂದ ಉಮ್ಮಳಿಸಿ ಧಗಧಗ ಉರಿದು ಶತ್ರುಬಲವನ್ನೆಲ್ಲ ಉರಿಸಿ ಬೂದಿ

* ಪಂಪಭಾರತ, ೧೩—೧೫೭

ಮಾಡಿದ್ದಾರೆ. ಇವರಿಬ್ಬರ ಪ್ರತೀಕಾರಯುಕ್ತವಾದ ಪ್ರತಾಪನಲ ವಾಚಕರ ಕಣ್ಣನ್ನು ಕೋರೈಸುವಂತೆ ಮಹಾಕವಿ ಉಜ್ವಲವಾಗಿ ಚಿತ್ರಿಸಿದ್ದಾನೆ. ಕಣ್ಣು ಕೋರೈಸಿದರೂ ಮತ್ತೆ ಮತ್ತೆ ಬಿಚ್ಚುಗಣ್ಣಿನಿಂದ ಕುರುಕ್ಷೇತ್ರದ ಭಯಾನಕದೃಶ್ಯಗಳನ್ನೆಲ್ಲ ನೋಡುತ್ತಾ ರನ್ನಮಹಾಕವಿಯ ಅನುಪಮ ಕಲೆಗೆ ಬೆರಗಾದುವರುಂಟೆ !

---

ಅಂತೆ ಮೂರ್ಛೆಗೆ ಸಂದಂ !

ರನ್ನನ ಪ್ರತಿಭೆ ಪರಾಕಾಷ್ಠೆಗೇರಿದ್ದು ಛಲದಂಕಮಲ್ಲನಾದ ದುರ್ಯೋಧನನ ಅಪೂರ್ವ ಪಾತ್ರನಿರ್ಮಾಣದಲ್ಲಿ. ಮಾನನಿಧಿಯೂ, ಸ್ವಾಭಿಮಾನಿಯೂ, ಅಸಹಾಯಶೂರನೂ ಆದ ಸುಯೋಧನನನ್ನು ಚಿತ್ರಿಸಿ ರನ್ನಮಹಾಕವಿಯಾದ ಜೊತೆಗೆ ಕವಿಚಕ್ರವರ್ತಿಯಾದ! ರನ್ನನಕೈಲಿ ತನ್ನ ಪಾತ್ರ ರೂಪುಗೊಂಡುದರಿಂದ ಸುಯೋಧನ ದುರಂತನಾಯಕನಾದ! ಅರಿಕೇಸರಿಯ ಗುಣಗಾನಕ್ಕಾಗಿ ಭಾರತರಚನೆಗೆ ತೊಡಗಿದ ಪಂಪಮಹಾಕವಿ ತನ್ನ ಪ್ರತಿಭೆಯನ್ನೆಲ್ಲಾ ಕರ್ಣನನ್ನು ಕೊಂಡಾಡುವುದರಲ್ಲಿ ವಿನಿಯೋಗಿಸಿರುವಂತೆ ರನ್ನಮಹಾಕವಿಯೂ ಸತ್ಯಾಶ್ರಯನ ಸಾಹಸನನ್ನು ಚಿತ್ರಿಸಲು ಹೊರಟು ದುರ್ಯೋಧನನ ಪಾತ್ರನನ್ನು ಸರ್ವಾಂಗಸುಂದರವಾಗುವಂತೆ ನಿರೂಪಿಸಿ ಕಾವ್ಯವನ್ನು ಮುಕ್ತಾಯಗೊಳಿಸಿದ್ದಾನೆ.

ಕುರುಕ್ಷೇತ್ರ ಕೊನೆಯ ಘಟ್ಟಕ್ಕೆ ಬಂದಿದೆ. ಕರ್ಮಯೋಗಿ ಭೀಷ್ಮರು ಶರಶಯನದಲ್ಲಿ ಮಲಗಿದರು; ದ್ರೋಣಾಚಾರ್ಯ ಶಸ್ತ್ರಸನ್ಯಾಸನಹಿಸಿದ ಮೇಲೂ ಧೃಷ್ಟದ್ಯುಮ್ನನ ಅಮಾನುಷ ಕೊಲೆಗೆ ಪಕ್ಕಕ್ಕಾಗಿ ಸಾಯಬಾರದ ಸಾವನ್ನು ಸತ್ತರು; ಜಯದ್ರಥ ಪರಲೋಕವಾಸಿಯಾದ; ಸುಯೋಧನನ ಮನದಂತೆ ಬಾಳಿದ ದುಶ್ಶಾಸನ ಭೀಮನ ಕೈಯಲ್ಲಿ ಮಡಿದು ರಕ್ತ ಮಾಂಸಗಳ ಮುದ್ದೆಯಾಗಿ ಹೋದ; ಕೊನೆತನಕ ಚಾಗಿಯಾಗಿ ಬಾಳಿದ ಕರ್ಣನ ಕಳೇಬರ ಕೆನ್ನೆತ್ತರಲ್ಲದ್ದಿ ಕೆಸರಾಗಿ ಹೋಯಿತು; ಶಲ್ಯನೂ ಸತ್ತುರುಳಿದ; ಇವರೆಲ್ಲರ ಸಾವನ್ನು ಸಾಮ್ರಾಟನಾದ ದುರ್ಯೋಧನ ಕಣ್ಣಾರೆ ಕಂಡು ಪುಷ್ಕಳ ಮರುಗಿದ್ದಾನೆ; ತನ್ನ ದುರದೃಷ್ಟಕ್ಕಾಗಿ ಕೊರಗುತ್ತಾನೆ.

ಭಾರತ ರಾಮಾಯಣಗಳು ಜೈನಮಹಾಕವಿಗಳ ಕೈಯಲ್ಲಿ ನವನೂತನ ರೂಪನ್ನು ತಾಳಿ ರಾರಾಜಿಸುವೆ. ಆ ಕಾವ್ಯಗಳ ಅನಾನುಷರೆಲ್ಲ ಜಿನಧರ್ಮದ ದಯಾರಸದ ಸೋಂಕಿನಿಂದ ಮಮಾನುಷರಾದರು! ಜೈನಕವಿಗಳ ಅನು ಕಂಪದಿಂದ ಲೋಕಕಂಟಕರೆಲ್ಲ ಅನುಪಮ ವ್ಯಕ್ತಿಗಳಾಗಿ ಕಂಗೊಳಿಸಿದರು! ಮಹಾಭಾರತದ ದುರ್ಯೋಧನನೂ ಕೂಡ ರನ್ನನ ಕೈ ಚಳಕದಿಂದ ಚಲ ದಂಕ ಮಲ್ಲನಾಗಿ ಅಭಿಮಾನಧನನಾಗಿ ರೂಪಾಂತರಗೊಂಡಿದಾನೆ:

ಅಮಹೃತ್ಸ್ನೇಹನೆಗೆ ಸಾಲ್ವನೊರ್ವನೆ ಗಂಡಂ ರುದ್ರಾವತಾರಂ ಗಂಡಂ!
ನೊಸಲೊಳ್ ಕಣ್ ಗಡಮೆಂದು ನಚ್ಚಿ ಪೊರೆದೆಂ ತಾನಕ್ಕೆ ತನ್ನಾಣ್ಮನ ||
ಕ್ಕಿಸಲಂಬಂ ತಿರುವಾಯ್ಗೆ ತಂದರಿನರೇ ತಪ್ಪುರ್ವರುಂ ಕೆಯ್ದುವಂ!
ಬಿಸುಟರ್ ಜೋಳದ ಪಾಳಿಯುಂ ಬಗೆದಿರಿಲ್ಲಾ ಪ್ರಾಣಿಯುಂ ದ್ರೋಣನುಂ ||

"ಅಶ್ವತ್ಥಾಮನಲ್ಲಿ ಎಷ್ಟೊಂದು ನಚ್ಚಿ ಕೆಯಿಟ್ಟೆ! ಸೇನಾಬಲನನ್ನೆಲ್ಲಾ ಕೊಂದು ಕೂಗಲು ಆತನೊಬ್ಬನೇ ಸಾಕೆಂದುಕೊಂಡೆ! ನೊಸಲಲ್ಲಿ ಮೂರನೇ ಕಣ್ಣೊಂದು ಇದೆಯೊಂದು ಕೊಂಡು ಹಿಗ್ಗಿದ್ದೆ! ಹೀಗಿದ್ದರೂ ಅವನಾಗಲಿ ಅವನಪ್ಪನಾಗಲಿ ಬಾಣವೊಂದಾದರೂ ಹೂಡಿದರೇ! ತಿಂದ ಮನೆಗೆ ಎರಡು ಬಗೆದು ಅವರಿಬ್ಬರೂ ಕತ್ತಿಗಳನ್ನು ಬಿಸುಟರಲ್ಲ!" ತಾನು ನಚ್ಚಿದ್ದ ಬಲ್ಲಾಳ್ಗಳನೆಲ್ಲ ಸುಯೋಧನ ಈಗ ಒರೆ ಹಚ್ಚುತ್ತಿದಾನೆ. ಈತನ ಹೇಳಿಕೆಯಲ್ಲೂ ಸತ್ಯವಿದೆ. ಇವನ ಪಕ್ಷದ ವೀರಾದಿ ವೀರರೆಲ್ಲ ಮನಃ ಪೂರ್ವಕ ಹೋರಾಡದೆ. ತಮ್ಮ ಪ್ರಾಣವನ್ನು ತಾವಾಗಿ ನೀಗಿಕೊಂಡರು.

ತಪನಸುತಂ ಬೇರಾಂ ಬೇ!
ರೆ ಪೊಲ್ಲದಂ ನುಡಿದನಾವಗಂ ಬಿಸುಟಂ ರ ||
ಕ್ಷಿಪ ಕೆಯ್ದುವನೆಮಗಾ ಮುನಿ!
ಯ ಪಾಂಡವಂ ಬಗೆದು ನೋಳ್ಪೊಡಶ್ವತ್ಥಾಮಂ ||

"ನನಗೂ ಕರ್ಣನಿಗೂ ಇದ್ದ ಅಸುರ ಸ್ನೇಹಕ್ಕೆ ಹುಳಿಹಿಂಡಲು ಸದಾ ಅಶ್ವತ್ಥಾಮ ಹೊಂಚು ಕಾಯುತ್ತಿದ್ದ. ಕೊನೆಯಲ್ಲಿ ರಕ್ಷಿಸುವ ಕತ್ತಿ ಯನ್ನೂ ಬಿಸುಟನು. ಪಾಂಡವರ ಕಡೆಯ ಗೂಢಾಚಾರಿಯೇ ಅಶ್ವತ್ಥಾಮ!" ಎಂದು ಕೊಂಡು ದುರ್ಯೋಧನ ಪ್ರಲಾಪಿಸುತ್ತಾನೆ. ಈತನನ್ನು ನೋಡಿ

ಮಾಗದವರಂತೆ ! "ಯುದ್ಧ ಮಾಡಬೇಕು, ಗೆಲುವನ್ನು ಪಡೆಯಬೇಕು; ಗೆಲದಿದ್ದರೂ ಚಿಂತೆಯಿಲ್ಲ ಹೋರಾಡುತ್ತಾ ಸತ್ತರೂ ಸರಿ; ಗೆಲಲೂ ಆಗದೆ ಸಾಯಲೂ ಆಗದೆ ಆ ಅಶ್ವತ್ಥಾಮ ತೊಲಗಿ ಹೋದ; ಅವನ ಹಿಂದೆಯೇ ಅವನ ಕೀರ್ತಿಯೂ ಹೋಗದಿರವೆ !" ತನ್ನಪಕ್ಷದ ಅಪ್ರತಿಮ ವೀರನಾದ ಅಶ್ವತ್ಥಾಮನ ನಡವಳಿಕೆಯನ್ನು ದುರ್ಯೋಧನ ಕ್ಷಾತ್ರವೀರ್ಯದ ಒರೆಗಲ್ಲಲ್ಲುಜ್ಜಿ ಬೆಲೆ ಕಟ್ಟುತ್ತಿದ್ದಾನೆ.

ದುರ್ಯೋಧನನನ್ನು ಸಂಜಯ ನೆರಳಾಗಿ ಹಿಂಬಾಲಿಸುತ್ತಿರುವನು; ಹಿತ ವಚನ ಳನ್ನಾಡಿ ಸಮಾಧಾನಪಡಿಸಲು ಯತ್ನಿಸುವನು. ಸತ್ತ ವೀರಾದಿ ವೀರರ ಶೌರ್ಯ ಸಾಹಸಗಳನ್ನು ಮತ್ತೊಮ್ಮೆ ದುರ್ಯೋಧನನ ನೆನಪಿಗೆ ತರುತ್ತಿರುವನು.

ಕಳಸಸಂಭವರ್ ಭಕ್ತಿಗೆ ।
ಕಳಸಾರೋಹಣಮಿದೆನಿಸಿ ನೆರಪಿದರನಿತುಂ ॥
ದಳವಲ್ತು ಕಾದಿ ಗೆಲಬಾ ।
ರಳವಲ್ತರ್ಜುನನ ಶೌರ್ಯಮಂ ನೀನರಿಯಾ ॥

ದ್ರೋಣಾಚಾರ್ಯರೂ, ಭೀಷ್ಮಾಚಾರ್ಯರೂ ಕೀರ್ತಿಗೆ ಕಳಶವಿಟ್ಟಂತೆ ಹೋರಾಡಿದರು; ಅವರೇನು ಮಾಡಿಯಾರು; ಅರ್ಜುನನೊಡನೆ ಕಾದಾಡಿ ಯಾರು ತಾನೆ ಗೆದ್ದಾರು; ಅವನ ಪರಾಕ್ರಮ ನಿನಗೆ ತಿಳಿಯದುದೇನು.

ನೃಪ ನಿನ್ನಂ ಪಿಡಿದುಯ್ಯೆ ಭಾನುಮತಿಯಂ ಸಂತೈಸಿ ಚಿಂತ್ರಾಂಗದಂ ।
ನುಪಯೋಗಾಸ್ತ್ರಮ ನೆಚ್ಚುತ ಕೂಪೆ ನಭದಿಂ ಗಾಂಡೀವಿತಪಾಂಗಳೇ ॥
ಕೃಪನೀ ಸೈಂಧವನೀ ಸರಿತ್ತನಯನೀ ರಾದೆಯನೀ ಮದ್ರಭೂ ।
ಮಿಪನೀ ಕುಂಭಜನೀ ಕುರುಪ್ರಭವರಂವೇಂ ಹಮ್ಮ್ರದಂ ಬೋವರೇ ॥

ದುರ್ಯೋಧನ, ಚಿತ್ರಾಂಗದನ ಕೈಸೆರೆಯಾಗಿ ನೀನು ಸಿಕ್ಕಿದ ಸಂದರ್ಭವನ್ನು ನೆನಿಸಿಕೋ; ಅಂಬರಕ್ಕೆ ನಿನ್ನನ್ನು ಅತ ಕೊಂಡೈದನಲ್ಲ ಆಗ ಅತ್ತುಗೋಳಾಡಿದ ನಿನ್ನರಸಿ ಭಾನುಮತಿಯನ್ನು ಸಂತೈಸಿದವರಾರು ? ಅರ್ಜುನನಲ್ಲವೆ ! ಚಿತ್ರಾಂಗದನನ್ನು ಇದುರಿಸಿ ನಿನ್ನನ್ನು ಅರ್ಜುನ ಬಿಡಿಸಿ ಕೊಂಡುಬರುವಾಗ ಕೃಪ, ಸೈಂಧವ, ಭೀಷ್ಮ, ದ್ರೋಣಕರ್ಣಾದಿಗಳು ಎತ್ತ ಹೋಗಿದ್ದರು ? ಮೂರ್ಛೆಗೆ ಸಂದಿದ್ದರೇನು ?

ಪವನಸುತಂ ಗದೆಗೊಳೆಗಾಂ ।
ಡವಿ ಬಿಲ್ಗೊಳೆ ಕೈಯ್ದುಗೊಳ್ವ ಮಾರ್ಕೊಳ್ವದಟರ್ ।
ಭುವನದೊಳಿಲ್ಲವರ್ಗಳ ಬಾ ।
ಹುವಿಕ್ರಮಂ ನಿನಗೆ ಪೊಸತೆ ಕೌರವರಾಯ ॥

ಭೀಮ ಗದೆ ತಿರುವಿನಿಂತಾಗ, ಅರ್ಜುನ ಗಾಂಡೀವವನ್ನು ಹೆದೆಯೇರಿಸಿ ಬಾಣಹೂಡಿದಾಗ ಅವರಿದಿರು ಕತ್ತಿಯೆತ್ತುವ ಧೀರನಾರು! ಅವರನ್ನು ಎದುರಿಸುವ ಸಾಹಸವಂತನುಂಟೆ! ಅವರ ಬಾಹುವಿಕ್ರಮದ ರುಚಿ ನಿನಗೇನು ಗೊತ್ತಿಲ್ಲವೆ? ಕ್ಷಮಾಶೀಲ ಧರ್ಮರಾಯ! ಅಸಹಾಯಶೂರ ಭೀಮ! ಅನುಪಮ ಸಾಹಸವಂತ ಅರ್ಜುನ! ವಿನಯದ ಸಾಕಾರ ನಕುಲ ಸಹದೇವರು! ಮುಳಿದಾಗ ಈ ವಿನಯಶೀಲರೆ ವಿಕ್ರಮಶೀಲರಾಗದಿರರು! ಇದೆಲ್ಲ ತಿಳಿದೂ ಸತ್ತವರನ್ನೇಕೆ ದೂಷಿಸುತ್ತೀ" ಸಹೃದಯನಾದ ಸಂಜಯನ ಸಂತಾಪದ ನುಡಿಗಳು! ಪಾಂಡವರ ಕೊಂಡಾಟದ ಕಿಡಿಗಳು!

ದುರ್ಯೋಧನ ಸ್ವಾಭಿಮಾನಿ! ಮಾನಧನ! ಪ್ರತಿಷ್ಠೆಯಿಂದ ಪ್ರಜ್ವಲಿಸುವ ಮಹಾಪರಾಕ್ರಮಿ! ಇವನಿದಿರು ಪಾಂಡವರನ್ನು ಹೊಗಳಿದರೆ ಅಡಿಯಿಂದ ಮುಡಿತನಕ ಕೋಪಕೆರದಿರದು! ಅವರಲ್ಲೂ ಚಿತ್ರಾಂಗದನಿಗೆ ಸೆರೆಯಾದ ಸಂದರ್ಭ ನೆನಪಿಗೆ ತಂದಾಗ ಅಹಿಕೇತನ ಹಲ್ಲಲ್ಲು ಕಡಿಯುತ್ತಾನೆ! ಸಂಜಯ ತನ್ನ ಹೊಗಳಿಕೆಯ ಹೊಳೆಯಲ್ಲಿ ಪಾಂಡವರನ್ನೆಲ್ಲ ತೇಲಿಸಿದ್ದನ್ನು ನೋಡಿ ಸುಯೋಧನ ಸಿಡಿಮಿಡಿಗೊಂಡು ಪಾಂಡವರೆಸಗಿದ ಅನ್ಯಾಯಗಳನ್ನು ಒಂದಾದಮೇಲೊಂದರಂತೆ ಬಿತ್ತರಿಸಿ ಅವರ ಅಮಾನುಷ ಕೃತ್ಯಕ್ಕೆ ವಾಚಕರೆಲ್ಲ ಹೇಸುವಂತೆ ಮಾಡಿದ್ದಾನೆ. ಪಾಂಡವರು ಪಟ್ಟ ಪಡಬಾರದ ಪಾಡನ್ನು ಉದ್ರೇಕಗೊಂಡು ವರ್ಣಿಸುತ್ತಾನೆ.

ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾ ।
ಪರನೆಂದೆಲ್ಲರ ಪೇಳ್ದ ಮಾತು ಪುಸಿಯಾಯ್ತೀ ಕಾರ್ಮುಕಾಚಾರ್ಯನಂ ॥
ಗುರುವಂ ಬ್ರಾಹ್ಮಣನಂ ತೊದಳ್ ನುಡಿದು ಕೊಂದಾಗಳ್ ಮೃಷಾಪಾತಕಂ ॥
ಪರಮೆಂಬೀ ನುಡಿಯಿಂ ಪೃಥಾ ಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ ॥

ಸತ್ಯಸಂಧನೆಂದೂ, ಧರ್ಮಪರಾಯಣನೆಂದೂ, ದಯಾಪರನೆಂದೂ ಧರ್ಮರಾಯನನ್ನು ಲೋಕವೇ ಕೊಂಡಾಡಿತು! ಇಂದು ಅವನ ಯಶಸ್ಸೆಲ್ಲ

ಹುಸಿಯಾಗಿದೆ; ಬಿಲ್ವಿದ್ಯೆ ಹೇಳಿಕೊಟ್ಟ ಗುರುವನ್ನು ಅದರಲ್ಲೂ ಬ್ರಾಹ್ಮಣ ನನ್ನು ಆ ದ್ರೋಣಾಚಾರ್ಯರನ್ನು ಸತ್ಯಸಂಧನೂ, ದಯಾಪರನೂ, ಧರ್ಮ ಪರಾಯಣನೂ ಆದ ಧರ್ಮರಾಯನೇ ಹೇಳಬಾರದ ಸುಳ್ಳನ್ನು ಹೇಳಿ ಕೊಂದು ಮಹಾಪಾತಕಿಯಾದ ! ಈ ಮಾತು ಪೂರ್ಣ ಸತ್ಯ ! ದುರ್ಯೋ ಧನನ ಉತ್ಪ್ರೇಕ್ಷೆಯಲ್ಲ. ಕುರುಕ್ಷೇತ್ರ ಪ್ರಾರಂಭವಾದ ಮೇಲೆ ಪಾಂಡ ವರ ನಡತೆಯೇ ಮಾರ್ಪಾಟಾಗುತ್ತೆ. ಮಾಡಬಾರದ ಕೃತ್ಯವನ್ನು ಅವ ರಲ್ಲಿ ಪ್ರತಿಯೊಬ್ಬರೂ ಮಾಡಿದ್ದಾರೆ. ಸತ್ಯಕ್ಕಿಂತ ಗೆಲುವೇ ಮುಖ್ಯ ವೆಂದುಕೊಂಡು ಕೃಷ್ಣಪರಮಾತ್ಮನ ನೇತೃತ್ವದಲ್ಲಿ ಪಾಂಡವರು ಅಮಾ ನುಷರಾಗಿ ವರ್ತಿಸಿದಾರೆ. ಅವತಾರಪುರುಷ ಅವಾಂತರವೆಬ್ಬಿಸಿ ಧರ್ಮರಾ ಯನ ಬಾಯಲ್ಲೂ ಅನೃತವನ್ನ ಬರುವಂತೆಮಾಡಿ ಸರ್ವಶಕ್ತನೆಂಬ ಹೆಸರಾಂತು ಮೆರೆದಿದಾನೆ ! ಸುಯೋಧನನ ಮಾತನ್ನು ಕೇಳುತ್ತ ಪಾಂಡ ವರ ಮೇಲಿನ ಗೌರವನನ್ನು ಇಳಿಸಿಕೊಳ್ಳುದ ಸಹೃದಯನುಂಟೆ !

ಗುರುವಂ ಪ್ರೋಜ್ಝಿತ ಚಾಪನಂ ಪುಸಿದುಕೊಂದಾ ಬೀರಮುಂ ಭೀಷ್ಮರಂ ।
ಶರಶಯ್ಯಾಗತರಂ ಕರತ್ತು ಗುರಿಯಿಟ್ಟಾ ಪ್ರೋಚ್ಚರಂ ಕರ್ಣನಂ ॥
ನಿರಥಜ್ಯಾಯುಧ ನೆನ್ನದಚ್ಚು ತಲೆಗೊಂಡಾ ಶೌರ್ಯಮುಂ ಪಾಂಡುಪು ।
ತ್ರರೊಳ್ಬಲ್ಲರ್ ಮೆರೆಯುತ್ತೆ ಸಾಹಸಧನಂ ದುರ್ಯೋಧನಂ ಬಲ್ಲನೆ ॥

ದ್ರೋಣಾಚಾರ್ಯನನ್ನು ಧರ್ಮಪುತ್ರ ಹುಸಿದು ಕೊಂದನು ! ಶರ ಶಯ್ಯಾಗತರಾದ ಭೀಷ್ಮರನ್ನು ಅನುಪಮಸಾಹಸವಂತನಾದ ಅರ್ಜುನ ಶಿಖಂಡಿಯನ್ನುಮರೆಮಾಡಿಕೊಂಡು ಕೊಂದನು! ರಥವಿಲ್ಲದವನೂ. ಆಯುಧ ವಿಲ್ಲದವನೂ ಆಗಿದ್ದ ಕರ್ಣನನ್ನು ಅತಿಸಾಹಸವಂತನಾದ ಅರ್ಜುನನೇ ತಲೆ ಹೊಯ್ದ ! ಈ ಒಂದೊಂದು ಅಮಾನುಷ ಕೃತ್ಯಗಳೇ ಅವರ ಸಾಹಸಸಾಗ ರದ ತರಂಗಮಾಲೆಗಳು ! ಇಂಥ ಹೀನಾಯಕೃತ್ಯವನ್ನು ಎಂದಿಗಾದರೂ ಸಾಹಸಧನನಾಧ ದುರ್ಯೋಧನ ಮಾಡಿಯಾನೆ ! ಇವನ ಹೇಳಿಕೆ ಅಕ್ಷ ರಶಃ ನಿಜ. ಪಾಂಡವರು ಅಂತೆಸಗಿದ್ದನ್ನು ಯಾರುತಾನೆ ಇಲ್ಲವೆಂದಾರು. ಸಾಹಸಧನ ನಮ್ಮೆಲ್ಲರ ಅನುಕಂಪೆಯನ್ನೂ ಸೂರೆಗೊಂಡಿದಾನೆ. ರನ್ನ ಮಹಾಕವಿಯ ಕಲಾಕುಶಲತೆಯಿಂದ ಸುಯೋಧನನ ಪಾತ್ರ ಮುಗಿಲನ್ನು ಮುಟ್ಟಿದೆ.

ಪಾಂಡವರ ಸಾಹಸದತ್ತ ದುರ್ಯೋಧನನಿಗೆ ಸಂದೇಹವಿದೆ. ತನ್ನ ಸಂದೇಹ ಇನ್ನೂ ದೃಢವಾಗುವುದಕ್ಕಾಗಿ ನಾನಾ ಸಂದರ್ಭಗಳನ್ನು ಸಂಜಯನ ನೆನಪಿಗೆ ತರುತ್ತಾನೆ. ಚಿತ್ರಾಂಗದನ ಕೈಲಿ ತಾನು ಸೆರೆಸಿಕ್ಕಿದ್ದನ್ನು ಗಳಪಿದ ಸಂಜಯನಿಗೆ ಪಾಂಡವರು ಪಟ್ಟ ಪಾಡನ್ನೆಲ್ಲ ವಿವರಿಸಿ ಸಮಾಧಾನಗೊಳ್ಳುತ್ತಾನೆ. ಪ್ರಕ್ಷುಬ್ಧವಾದ ತನ್ನ ಹೃದಯದ ಸಂತಾಪವನ್ನೆಲ್ಲ ಅಹಿಕೇತನ ಕಾರುತ್ತಾನೆ.

> ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾ ।
> ಗನೆ ಭಗದತ್ತನಾನೆ ಬಿರಿಯೆಲ್ವುಡಿವನ್ನೆಗವೊತ್ತೆ ಗಂಡನಾ ॥
> ಗನೆ ಕೊಲ್ಲೊಲ್ಲದಂಗಪತಿ ಬಿಲ್ಲೊಳೆ ಕೋವೆಳೆವಲ್ಲಿ ಗಂಡನಾ ।
> ಗನೆ ಕುರುಬಾಲ ಸಂಹರಣಮಾತ್ರದೆ ಮಾರುತಿ ಗಂಡನಾದನೇ ॥

"ಅಂದು ಸಭಾಂಗಣದಲ್ಲಿ ನನ್ನ ಅನುಜನು ದ್ರೌಪದಿಯ ತಲೆಗೂದಲನ್ನು ಹಿಡಿದು ಎಳೆದಾಡುವಲ್ಲಿ ಆಗ ಭೀಮಸೇನನ ಗಂಡುತನ ಎಲ್ಲಿ ಹೋಗಿತ್ತು; ಭಗದತ್ತನಾನೆ ವಾಯುಪುತ್ರನ ಎಲುಬುಗಳೆಲ್ಲ ಪುಡಿಯಾಗುವಂತೆ ತುಳಿದಾಡಿತಲ್ಲ ಆ ವೇಳೆಯಲ್ಲಿ ಈತನ ಪರಾಕ್ರಮವೇನಾಗಿತ್ತು; ಅದೂ ಹೋಗಲಿ ನಮ್ಮ ಕರ್ಣ ಬಿಲ್ಲಲ್ಲಿ ಈತನನ್ನು ಜಗ್ಗಿದರದರ ಎಳೆದಾಗ ಏನುಮಾಡುತ್ತಿದ್ದ. ಕೊಲ್ಲಲಿಷ್ಟವಿಲ್ಲದೆ ಭೀಮನನ್ನು ಕರ್ಣ ವುಳಿಸಿದನೇ ಹೊರತು ಅನ್ಯಥ ಅಲ್ಲ. ಕೇವಲ ಕುರುಬಾಲಕರನ್ನು ಕೊಂದ ಮಾತ್ರಕ್ಕೆ ಮಾರುತಿ ಗಂಡಾದನೇನು" "ವನಿತೆಯ ..............ತೆಗೆವಲ್ಲಿ ಗಂಡನಾದನೆ" ಎಂಬ ಮಾತು ದುರ್ಯೋಧನನ ಕೀರ್ತಿಯನ್ನು ಹೆಚ್ಚಿಸಲಾರದು ! "ಭಾನುಮತಿಯನ್ನು ಅಂದು ಅರ್ಜುನ ಸಮಾಧಾನಮಾಡಿ ನಿನ್ನನ್ನು ಚಿತ್ರಾಂಗದನಿಂದ ಬಿಡಿಸಿದನೆಂದು ಸಂಜಯ ನುಡಿದಾಗ ಕೋಪೋದ್ರೇಕನಾದ ದುರ್ಯೋಧನ ಈ ಮಾತನ್ನು ಜೇಕೆಂದೇನುಡಿದಿದಾನೆ "ಕುರುಬಾಲ....ಗಂಡನಾದನೆ" ಎಂಬ ವಾಕ್ಯಧ್ವನಿ ಪೂರ್ಣವಾಗಿದೆ. ತನ್ನೊಡನೆ ಹೋರಾಡಿ ಗೆದ್ದಾಗಮಾತ್ರ ಭೀಮಸೇನ ನಿಜವಾದ ಪರಾಕ್ರಮಿಯಾಗಬಲ್ಲ ಎಂಬುದೇ ಈತನ ಅಭಿಪ್ರಾಯ. ಈ ಮಾತನ್ನು ಕೇಳಿ ರೋಮಾಂಚನಗೊಳ್ಳದ ವಾಚಕರುಂಟೆ ! ಸುಯೋಧನನನ್ನು ಸಾಹಸಧನ ಎಂದು

ಕೊಂಡಾಡದವರಾರು ! ಮಾನನಿಧಿ ಎಂದು ಮನಸಾರೆ ಹೊಗಳದವರುಂಟೆ ದ್ರೌಪದಿಗಾದ ಮಾನಭಂಗವನ್ನು ನೋಡಿಯೂ ಏಳ್ಳನೆ ಕಣ್ಣು ಬಿಡು ತ್ತಿರ್ದ ಪಾಂಡವರು ಗಂಡಸರೆ? ಸುಯೋಧನ ಪ್ರಶ್ನೆ ಹಾಕುತ್ತಾನೆ.

ಪಾಂಡವರ ಉದ್ಧಾರಕನಾದ ಹಾಗೂ ಅವತಾರ ಪುರುಷನಾದ ಕೃಷ್ಣನನ್ನೂ ಸುಯೋಧನ ತೆಗಳದಿರಲಾರನು. ಯಾರಾದರೇನಂತೆ ಆತನೂ ಶತ್ರುಪಕ್ಷದವನಲ್ಲವೆ.

ಪುರುಷರ್ ಮೂವರೊಳೊರ್ಬನೆಂಬರಸುರ ಪ್ರಧ್ವಂಸಿಯೆಂಬರ್ ಜಗ ।
ದ್ಗುರುವೆಂಬರ್ ಪೆರರ್ಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂ ॥
ಕರನಾದಂ ಕರವೇಳಿಯಾದನದರಿಂ ಸೂತಂ ಭಟಂ ಪೇಳಿಯೆಂ ।
ಬರಮಾತೊಪ್ಪುಗುಮಾದಿದೇವನೆಸನೀಲ್ ಕೃಷ್ಣಂಗದೆಂತೊಪ್ಪುಗುಂ ॥

"ಕೃಷ್ಣನನ್ನು ತ್ರಿಮೂರ್ತಿಗಳಲ್ಲೊಬ್ಬನೆನ್ನುವರು; ರಾಕ್ಷಸರನ್ನು ನಿರ್ನಾಮಗೊಳಿಸಿದವನೆನ್ನುವರು; ಜಗದ್ಗುರು ಎಂದೂ ಹೇಳುವರು; ಅಂಥ ಪರಮಾತ್ಮ ಇನ್ನೊಬ್ಬರ ತೇರನ್ನೇಕೆ ನಡೆಸುತ್ತಾನೆ; ಅರ್ಜುನನ ಬಳಿ ಕಿಂಕರನಾದುದೇಕೆ; ಅವನೊಬ್ಬ ಹೇಡಿ; ಸೂತ; ಕೀಳಾಳು ಎಂದರೆ ಕೃಷ್ಣನ ವ್ಯಕ್ತಿತ್ವಕ್ಕೆ ಒಪ್ಪುವಮಾತು; ಅಂತಲ್ಲದೆ ಈ ಕೃಷ್ಣ ದೇವನೆಂತಾ ದನು." "ಹತ್ತು ಅವತಾರ ಮುಗಿದ ಮೇಲೆಬಂದ ಹನ್ನೊಂದನೆಯದೇನು ಈ ನೂತನಾವತಾರ ?" ಉದ್ರೇಕಗೊಂಡು ದುರ್ಯೋಧನ ಇಂತು ನುಡಿ ದಿದಾನೆ. ಕೃಷ್ಣಭಕ್ತರಮನವನ್ನು ಆಕರ್ಷಿಸುವಂತಹ ತರ್ಕವಿತರ್ಕವ ನ್ನೆಬ್ಬಿಸಿದಾನೆ ರನ್ನನ ಸುಯೋಧನ ! ಇವನ ಒಲವು ಸದಾ ಛಲದಕಡೆ; ಈ ಛಲ ಈತನನ್ನು ಸದಾ ಹೋರಾಟಕ್ಕೀನೆ ತಳ್ಳುತ್ತದೆ.

ಏನುಮಾಡಿದರೂ ದುರ್ಯೋಧನ ದಾರಿಗೆ ಬರಲಿಲ್ಲ. ಆದರೂ ಸ್ವಾಮಿಭಕ್ತನಾದ ಸಂಜಯ ಮರುಕಗೊಂಡು.

ಪ್ರತಿಕೂಲ ದೈವನೈ ನೀಂ ।
ಪ್ರತಿ ನೃಪರನುಕೂಲ ದೈವರ ಸಹಾಯನೆ ನೀಂ ॥
ಪ್ರತಿ ನೃಪರ ಸಹಾಯಜಿತ ।
ಪ್ರತಿ ಬಲರವರಿಂದನರ್ಥಕಂ ವಾಕ್ಯಾರ್ಥಂ ॥

"ದುರ್ಯೋಧನ ನೀನೇನುಮಾಡಿದರೂ ದೇವರು ಪ್ರತಿಕೂಲನಾಗಿದ್ದಾನೆ. ಪಾಂಡವರಿಗಾದರೋ ಅನುಕೂಲನಾಗಿದ್ದಾನೆ; ನಿನಗೆ ಇಂದು ಯಾರ ನೆರವೂ ಇಲ್ಲ; ಅತ್ತ ಪಾಂಡವರಾದರೊ ಅಸಹಾಯಶೂರರಾಗಿದ್ದಾರೆ; ವಾದವಿವಾದ ನಿರರ್ಥಕವಾದುದು" ಎಂದಾಗ ಸಾಹಸಧನನಾದ ದುರ್ಯೋಧನ ಮರುಕ್ಷಣದಲ್ಲೇ ಮಹಾತ್ಮರಿಗನುಗುಣವಾದ ಮಾರುತ್ತರವನ್ನೀಯುತ್ತಾನೆ.

ಸಮರಜಯಂ ದೈವಾಯ ।
ತ್ತಮದರಿನಾ ಪುರುಷಾಕಾರಮೆಮಗಾಯತ್ತೇನಗಳ್ ॥
ಯಮಸಂಭವಾದಿಗಳೊಳೊಂ ।
ದೆ ಸಮಸ್ತಕ್ಷಾಂತಿರವೆನ್ನ ಫಲಮುಂ ಪಿರಿದೇಂ ॥

"ಜಯವೆಂಬುದು ದೇವರ ಕೈಯಲ್ಲೇ ಇರಲಿ; ಹೋರಾಡುವುದು ನನ್ನ ಕೈಯಲ್ಲೇ ಇದೆ. ಪಾಂಡವರನ್ನೆಲ್ಲ ನಾನೊಬ್ಬನೆ ಇದುರಿಸಿ ಹೋರಾಡುತ್ತೇನೆ; ನನ್ನ ಛಲವನ್ನೇ ಲೋಕದಿದಿರು ಮೆರೆಸುತ್ತೇನೆ." "ಇಂದೇನಾದರು ನಾನು ಹಿಂಜರಿದೆನಾದರೆ, ಭೀಷ್ಮದ್ರೋಣ ಕರ್ಣಾದಿಗಳು ಸತ್ತುಹೋದುದರಿಂದ ದುರ್ಯೋಧನ ಶತ್ರುಗಳನ್ನೆದುರಿಸಲಾರದೆ ಅಂಜಿ ಅಳುತ್ತಿದ್ದಾನೆ ಎಂದು ಲೋಕ ನನ್ನನ್ನು ಪರಿಹಾಸ್ಯಮಾಡದಿರುತ್ತದೆಯೆ! ನನಗೆ ಯಾರ ನೆರವೂ ಬೇಡ; ಈ ನನ್ನ ಭುಜ ಹಾಗೂ ನನ್ನ ಗದಾದಂಡ ಎಂಬೆರಡೇ ನನ್ನ ಸರ್ವಸ್ವ. ಉಸಿರಿರುವತನಕ ಇವೆರಡರ ನೆರವಿಗಾಗಿ ಕಾದು ಕುಳಿತಾನೆ ಈ ಸುಯೋಧನ" ಎಂದು ನುಡಿದು ಕಾಲದಂಡ ಪ್ರಚಂಡಮಪ್ಪ ತನ್ನ ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು" ಫಣಿರಾಜಕೇತನ ಸಮರಾಭಿಮುಖನಾದನಂತೆ! ಈತನ ಕೆಚ್ಚೆದೆಗೆ ಬೆಚ್ಚದವರುಂಟೆ. ಛಲಗಾರನೆಂದರೆ ಸುಯೋಧನನೇ ಎಂದುಕೊಂಡು ಮೆಚ್ಚದಾತ ಸಹೃದಯನಾದನೇ. ಈತನ ಒಂದೊಂದು ಮಾತಿನಲ್ಲೂ ಸಾಹಸ ಸಾಕಾರಗೊಂಡಿದೆ; ಕೆಚ್ಚುಕೆಡುಕಿದರಿ ವಾಚಕರನ್ನು ಬೆರಗುಗೊಳಿಸದಿರದು.

ದುರ್ಯೋಧನ ಸಮರಾಭಿಮುಖನಾದ. ಗದಾದಂಡ ಭುಜವನ್ನೇರಿ ಶತ್ರುಗಳನ್ನು ಮೂದಲಿಸುತ್ತಿದೆ: ಪಂಚಪಾಂಡವರನ್ನೂ ಕಾಳ್ಗೆ

ರೆದು ಕದನಕ್ಕೆ ಕರೆಯುತ್ತಾನೆ. ಸಂಜಯ ಪರಿಸ್ಥಿತಿಯನ್ನು ಕೂಲಂಕುಷ ವಾಗಿ ತಿಳಿದಿದ್ದಾನೆ, ಸದಾ ತನ್ನ ಪ್ರಭುವಿನ ಹಿತಕ್ಕಾಗಿ ಹಂಬಲಿಸುತ್ತಾನೆ. "ಪವನಾತ್ಮಜಂ ಮಹಾರಥನ್, ಅವನಿಪ. ನೀಂ ಸಮರಥನ್, ಅಧಿಕನೊಳ್ ಮರೆ ಬದ್ಧವೈರಮುಂ, ಸಂಧಿನೊಳ್ಪುದುತ್ತಮಪಕ್ಷಂ." ಎಂದಾಕ್ಷಣ ಚಲದಂಕನಪ್ಪನಾದ ಅ ಹಿ ಕೇ ತ ನ ಹಲ್ಲುಕಡಿಯುತ್ತಾ "ಅವನು ಅಥಿರಥನೆ ? ನನಗಿಂತಲೂ ಬಲಯುತನೆ ! ಆತನಿಗಿಂತ ನಾನು ಕೀಳೆ ?

ಪೆರರಂ ಪೊಗಳ್ವಪೆ ನಿಮ್ಮಂ ।
ಕಿರಿಯಂ ಮಾಡಿದಪೆ ಯೆಲವೋ ಸಂಜಯ ನೀನುಂ ॥
ಪೆರನೊರ್ವಂ ಬರ್ಪೋಜಂ ಪ್ರ ।
ಪೆರನೊರ್ವಂ ಸಿಂಧುಸುತ್ರನಾಗಲ್ ಬಗೆವೋ ॥

ಎಲೋ ಸಂಜಯ, ಸದಾ ಪರರನ್ನು ಹೊಗಳುತ್ತಿ ; ನನ್ನನ್ನಾದರೋ ಇಳಿಸಿ ಹಳಿಯುತ್ತಿ ; ಭೀಷ್ಮದ್ರೋಣರು ಸತ್ತರೋ ರೆ ಪರಸ್ಥಿತಿ ನಿಂತಿತೆಂದುಕೊಂಡೆ ; ಆದರೆ ನೀನು ಇನ್ನೊಬ್ಬ ದ್ರೋಣನಾಗಿದ್ದಿ ; ಇನ್ನೊಬ್ಬ ಭೀಷ್ಮನಂತಾನೆ." ಮಾನ ಧನ ಮುಳಿದು ಹೀಗೆಂದಿದಾನೆ. ಸ್ವಾಭಿಮಾನಿಯಾದ ದುರ್ಯೋಧನ ಎಂದಿಗಾದರೂ ಪಾಂಡವರ ಸ್ತುತಿಗೆ ಕಿವಿಗೊಟ್ಟಾನೆ ? ಅವರನ್ನು ಸ್ತುತಿಸುವುದರ ಜೊತೆಗೆ ತನ್ನನ್ನು ಹಿಯಾಳಿಸಿ ನೋಡಿ ಸಹಿಸಿಯಾನೆ ?

ಸಂಜಯ ಸ್ವಾಮಿಭಕ್ತನಾದರೂ ಮಾನನಿಧಿಯಾದ ದುರ್ಯೋಧನ ನಿದರು ಏನುಮಾತಾಡಬೇಕು ಎಂತು ಒಲಿಸಿಬೇಕು ಎಂಬುದರ ಕಡೆ ಅಷ್ಟಾಗಿ ಗಮನವಿಟ್ಟಿಲ್ಲ. ಅದರಿಂದಲೇ ಈತನನ್ನು "ನಿಸರ್ಗ ಮೂರ್ಖ ಸ್ವಭಾವ ದೃಢ ಸ್ವಾಮಿಹಿತ" ಎಂಬ ಗುಣವಾಚಕಗಳಿಂದ ರನ್ನಮಹಾಕವಿ ಈತನ ವ್ಯಕ್ತಿತ್ವಕ್ಕೆ ಒಪ್ಪುವಂಥ ರೂಪಕೊಟ್ಟಿದ್ದಾನೆ. ದುರ್ಯೋಧನನ ಮಾನಕ್ಕೆ ಹೊಯ್ ಕ್ಕೈಯಾಗಿ ಸಂಜಯನ ನಿಸರ್ಗಮೂರ್ಖತ್ವ ನೆತೆದು ನಿಂತಿದೆ. ಸುಯೋಧನನ ಚಲಕ್ಕೆ ಸರಿಮಿಗಿಲಾಗಿ ಸಂಜಯನ "ಪ್ರಭುಹಿತ" ಪ್ರಭೆ ಬೀರಿ ಪ್ರಕಾಶಿಸುತ್ತದೆ. ಒಂದೆರಡು ಮಾತಿನಲ್ಲಿ ಸಂಜಯನ ವ್ಯಕ್ತಿತ್ವವನ್ನು ರನ್ನಕವಿ ಪೂರ್ಣಗೊಳಿಸಿ ಅತಿಶಯ ಕಳೆಯನ್ನು ಮೆರೆದಿದಾನೆ.

" ಬಲರಾಮನಿದ್ದಾನೆ, ಅಶ್ವತ್ಥಾಮನೂ ಬದುಕಿರುವನು. ಇವರಿಬ್ಬರ ನೆರವನ್ನು ಪಡೆದು ಹೋರಾಡದೆ ನಿಜಭುಜ ಭಲವನ್ನೇ ನಚ್ಚಿ ಪಾಂಡವರೊಡನೆ ಹೋರಾಟಕ್ಕೆ ಹೊರಟು ನಿಂತಿರುವೆ ! ಕೃಪಕೃತವರ್ಮರೂ ಇಲ್ಲವೆ ? ಈ ನಾಲ್ವರಲ್ಲಿ ಯಾರಾದರು ಒಬ್ಬರಿಗೆ ವೀರಪಟ್ಟವನ್ನು ಕಟ್ಟಿ ಹಗೆಗಳನ್ನು ಧ್ವಂಸಮಾಡು " ಎಂದು ಸಂಜಯ ಬೆಸಗೊಂಡಾಗ

ತ್ರಿದಶ ನದೀ ಸುತನಿಂ ತೀ ||
ರದ ಕಜ್ಜಂ ಮುನ್ನ ಕಳಶ ಸಂಭವನಿಂ ತೀ
ರದ ಕಜ್ಜಮಿನ ಜನಿಂ ತೀ |
ರದಕಜ್ಜಂ ದ್ರೋಣಪುತ್ರನಿಂ ತೀರ್ದಪುವೆ ||

ಭೀಷ್ಮರು ಮಾಡಲಾರದೆ ಹೋದುದನ್ನು, ದ್ರೋಣರ ಕೈಲಾಗದೆ ಹೋದಕಾರ್ಯವನ್ನು, ಕರ್ಣನ ಕೈಲೂ ತೀರದ ಕಜ್ಜವನ್ನು ಈ ದ್ರೋಣ ಪುತ್ರ ನೆರವೇರಿಸಿಯಾನೆ ?" " ದ್ರೋಣಾಚಾರ್ಯರಿಂದ ನನುಗೆ ಬೇಕಾದಷ್ಟು ಒಳ್ಳೆಯದಾಯ್ತು ! ಇನ್ನು ಅಶ್ವತ್ಥಾಮ ಒಳ್ಳೇದನ್ನು ಮಾಡವಿರುತ್ತಾನೆಯೆ ? ರಣರಂಗಕ್ಕೆ ಯಾರ ಆಸೆಯನ್ನು ನಾನು ಇಟ್ಟುಕೊಂಡಿಲ್ಲ; ಕೈಸೆಡಿಗಿದ ಕುಡಿಯೇನು ಮಿಡಿಯೇನು ? ದ್ರೋಣನಿಂದಾದುದೇ ಅಶ್ವತ್ಥಾಮನಿಂದಲೂ " ರೋಸಿಹೋದ ಸುಯೋಧನ ವ್ಯಂಗವಾಗಿ ನುಡಿದಿದ್ದಾನೆ ತನ್ನ ಕಣ್ಣೆದಿರೇ ತನ್ನ ಪಕ್ಷದ ಅದ್ಭುತ ವ್ಯಕ್ತಿಗಳೆಲ್ಲ ಹೇಳ ಹೆಸರಿಲ್ಲದಂತಾದರು ; ಪ್ರಚಂಡ ವ್ಯಕ್ತಿಗಳೆಲ್ಲ ಪಾಮರರಂತೆ ಪರಾಭವನಪ್ಪಿ ಸತ್ತುಹೋದರು. ಇದನೆಲ್ಲ ಕಣ್ಣಾರೆ ಕಂಡ ದುರ್ಯೋಧನ ಯಾರ ಬಲದಮೇಲೂ ಆಶೆಯಿಡದಂತಾಗಿದಾನೆ. ನಿಶ್ಚಲನಾದ ನಿರಾಶನಾಗಿದ್ದಾನೆ; ಆದರೆ ರಣ ಹೇಡಿಯಾಗಿಲ್ಲ !

ಹಲಿಯಂ ರಣಕೇಳಿಕೂತು |
ಹಲಿಯಂ ನಚ್ಚಿರ್ದೆನವನು ಸಾಹವ ಕೋಲಾ |
ಹಲದಲಿ ತೀರ್ಥಯಾತ್ರಾ |
ಚ್ಛಲದಿಂದ ಮಗಲ್ದು ಪೋದನಿನ್ನುಂ ಬಾರಂ ||

" ರಣಕೇಳಿ ಕುತೂಹಲಿಯಾದ ಬಲರಾಮನನ್ನು ನೆರವಾಗೆ ಬಂದಾನೆಂದು ನಂಬಿದ್ದೆ ; ಯುದ್ಧದ ಕೋಲಾಹಲ ಎದ್ದಾಗ ಅತ್ತ ತೀರ್ಥಯಾತ್ರೆಯ ನೆಪದಿಂದ ಬಲರಾಮನೂ ನನ್ನನ್ನು ತೊರೆದ; ಇನ್ನೂ ಬಂದಿಲ್ಲ ? ತನ್ನ ದುರಾದೃಷ್ಟಕ್ಕಾಗಿ ಚಲದಂಕಮಲ್ಲ ಗೋಳಾಡುತ್ತಾ ನಮ್ಮನ್ನೂ ಗೋಳಾಡುವಂತೆ ಮಾಡುತ್ತಾನೆ.

ಮಡಿವೊಡೆ ಪಗೆ ರವಿಸುತನಿಂ ।
ಮಡಿಗುಂ ಮೇಣ್ ಶೌರ್ಯಶಾಳಿ ದುಶ್ಶಾಸನನಿಂ ।
ಮಡಿಗುಂ ಮೇಣೆನ್ನಿಂದಂ ।
ಮಡಿಗುಂ ಪೆರಪೆರರಿನ್ನೆನ್ನ ಪಗೆ ಮಡಿದಪುದೆ

" ನನಗಾಗದವರನ್ನು ಕೊಂದಿದ್ದರೆ ಕರ್ಣ ಕೊಲ್ಲಬಹುದಾಗಿತ್ತು ; ಇಲ್ಲವೆ ಶೌರ್ಯಶಾಲಿಯಾದ ದುಶ್ಶಾಸನನ ಕೈಲಿ ಅವರು ಸಾಯಬೇಕಾಗಿತ್ತು. ಇವರಿಬ್ಬರೂ ತಪ್ಪಿದಮೇಲೆ ನಾನಿದ್ದೇನೆ; ನಾನೇ ಅವರನ್ನೆಲ್ಲ ಕೊಂದುಕೂಗಬಲ್ಲೆ; ಇನ್ನಾರ ಕೈಲೂ ಈ ಕಾರ್ಯ ಸಾಧ್ಯವಾಗದು.'' ದುರ್ಯೋಧನನಿಗಾಗಿ ಬಾಳಿದವರೆಂದರೆ ದುಶ್ಶಾಸನ ಕರ್ಣರಿಬ್ಬರೇ. ಇವರಿಬ್ಬರೂ ಮನಃಪೂರ್ವಕ ತಮ್ಮ ಪ್ರಭುವಿಂಗೆ ಗೆಲುವನ್ನು ಹಾರೈಸಿದರು. ದುಶ್ಶಾಸನನಾದರೋ ಹಾರೈಸುವುದರ ಜೊತೆಗೆ ಮನಃಪೂರ್ವಕ ಹೋರಾಡಿ ಮಡಿದ. ಕರ್ಣ ಮನಃಪೂರ್ವಕ ಹೋರಾಡಲಾರದೆ ಹೋದಾಗ್ಯೂ ದುರ್ಯೋಧನನ ಶ್ರೇಯಸ್ಸಿಗಾಗಿ ಪ್ರಾರ್ಥಿಸಿ ಸತ್ತ. ಇವರಿಬ್ಬರ ಮೇಲೂ ಅಪಾರವಾದ ವಿಶ್ವಾಸವನ್ನು ಸುಯೋಧನ ಇಟ್ಟಿದ್ದ. ಇವರಿಬ್ಬರನ್ನೂ ಮೆಚ್ಚಿಕೊಂಡಾಡಿದ್ದಾನೆ. ಸುಯೋಧನ ಮೆಚ್ಚಿದ ಮಹದ್ವ್ಯಕ್ತಿಗಳನ್ನು ನಾವೂ ಮೆಚ್ಚದಿರಲು ಸಾಧ್ಯವೆ ?

ಕಾನೀನಂ ದ್ರೋಣನದೀ ।
ಸೂನುಗಳಳಿದಿಂ ಬಳಿಕ್ಕೆ ಪೆರತೆನಗಿಲ್ಲೆಂ ।
ದಾನೆ ಗಳಿತಾಶ್ರುಜಲದಿಂ
ಸೇನಾಪತ್ಯಾಭಿಷೇಕಮಂ ಮಾಡಿದಪೆಂ ॥

“ ಕರ್ಣ ದ್ರೋಣ ಭೀಷ್ಮಾದಿಗಳು ಅಳಿದಮೇಲೆ ನನಗಾರೂ ಇಲ್ಲವೆಂದುಕೊಂಡು ಸುರಿಯುತ್ತಿರುವ ಕಣ್ಣೀರಿಂದ ನನಗೆ ನಾನೇ ಸೇನಾಪತ್ಯಾಭಿಷೇಕವನ್ನು ಮಾಡಿಕೊಳ್ಳುತ್ತೇನೆ “ ಎಂದು ಸುಯೋಧನ ಕಣ್ಣೀರು ಸುರಿಸುವ ದಾರುಣಮಯ ಸನ್ನಿವೇಶಕ್ಕೆ ರನ್ನಮಹಾಕವಿ ನಮ್ಮನ್ನು ಸೆಳೆದಿದ್ದಾನೆ. ಕಲ್ಲೆದೆಯೂ ಕರಗುವಂಥ ಕಲಾಕುಶಲತೆಯನ್ನು ಮೆರೆದಿದ್ದಾನೆ.

ದುರ್ಯೋಧನ ಸಂಕಟದಿಂದ “ ಸಂಜಯ, ಅವರಿಬ್ಬರೂ ನನ್ನ ಎರಡು ತೋಳುಗಳಪ್ಪ ; ಎರಡು ಕಣ್ಣುಗಳಯ್ಯ ; ಯುವ ರಾಜನಾದ ದುಶ್ಶಾಸನ ಅಂಗರಾಜನಾದ ಕರ್ಣನನ್ನು ಕಳೆದುಕೊಂಡಮೇಲೆ ರಣರಂಗವೊಂದೇ ನನಗೆ ಗತಿ ; ಅಂಥವರು ಹೋದಮೇಲೆ ಇನ್ನೂ ನಾನು ಬಾಳಬಹುದೇ ; ” ಎಂದು ಮಮ್ಮಲ ಮರುಗುತ್ತಾನೆ.

ಎನಗೆ ಮನಮಿಂದು ಶೂನ್ಯಂ ।
ಮನೆಶೂನ್ಯಂ ಬೀಡು ಶೂನ್ಯಮಾದುದು ಸಕಲಾ ।
ವನಿಶೂನ್ಯಮಾಯ್ತು ದು ।
ಶ್ಶಾಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ ॥

ದುಶ್ಶಾಸನ ಕರ್ಣ ಇಬ್ಬರೂ ಇಲ್ಲದಂತಾದರು ; ಮನಸ್ಸಿನಲ್ಲಿ ಸದಾ ಅದೇ ಚಿಂತೆ ; ಮನೆಗೆ ಹೋಗೋಣವೆ ಅಲ್ಲೇನಿದೆ ; ಗಂಡಂದಿರನ್ನು ಕಳಕೊಂಡು ಗೋಳಾಡುವ ಮುಖಗಳು ! ಬೀಡಿನಲ್ಲಾದರು ಇರೋಣವೆಂದರೆ ವೀರಾದಿ ವೀರರೆಲ್ಲ ಸತ್ತುರುಳಿ ಬೀಡೂ ಮಸಣವಾಗಿದೆ ; ಭೂಮಿಯಲ್ಲಿ ನನ್ನವರು ಯಾರಿದ್ದಾರಪ್ಪ ! ಎಲ್ಲೆಲ್ಲೂ ನನ್ನಪಾಲಿಗೆ ಬರೀ ಶೂನ್ಯ ! ದುಶ್ಶಾಸನ ಕರ್ಣ ಹೋದನಂತರ ನಾನು ಹೇಗೆ ಬದುಕೇನು ?

ಬಾಂಧವರನಿರಿಸಿ ಸರಸಿಜ !
ಬಾಂಧವ ತನಯನು ಮನೆನ್ನ ತಮ್ಮನುಮಂನ ।
ಮ್ಮಂಥ ನರೇಂದ್ರನ ಮೊಗಮಂ ।
ಗಾಂಧಾರಿಯ ಮೊಗಮನಾವ ಮೊಗದೊಳಗೆ ನೋಳ್ಪೆಂ ॥

ಬಂಧುಗಳನ್ನೆಲ್ಲ ಕೊಲ್ಲಿಸಿದೆ' ದುಶ್ಶಾಸನನನ್ನೂ ಕರ್ಣನನ್ನೂ ಬಲಿ ಕೊಟ್ಟೆ' ಅಂಧನಾದ ನನ್ನಯ್ಯನಿಗೆ ಹೇಗೆ ಮುಖ ನೋಡಿಸಲಿ' ಗಾಂಧಾರಿಯ ದುಃಖಪೂರಿತ ಮೊಗವನ್ನು ಹೇಗೆ ನೋಡಲಿ' ಇಷ್ಟಕ್ಕೆಲ್ಲ ಕಾರಣನಾದ ನನ್ನ ಮುಖವನ್ನು ಅವರಿಗೆ ನೋಡಿಸಲಾದೀತೆ'' ಇದಿಷ್ಟೂ ಕರುಣಾಶಾಲಿಯಾದ ಸುಯೋಧನನ ಸಂಕಟ. ಆತನ ಶೋಕಸಾಗರದಲ್ಲಿ ಮರುಕದ ತೆರೆ ಒಂದ ದ ನೋರೊಂದಾಗಿ ಮೋರೆದು ವಾಚಕರ ಹೃದಯವನ್ನು ಹಿಂಡದಿರುತ್ತವೆಯೆ ? ಅಂಧ ನರೇಂದ್ರ, ಗಾಂಧಾರಿಯರನ್ನು ಸುಯೋಧನ ನೆನೆದಾಗ ಸಹೃದಯರ ಕರುಳು ಸುಲಿಚದಿರಲು ಸಾಧ್ಯವೆ ?

ಸುಯೋಧನನನ್ನು ಸಂತಯಿಸಿ ಸಂತಯಿಸಿ ಸಂಜಯನಿಗೆ ಸಾಕಾಗಿ ಹೋಗಿರಬೇಕು. "ಸರ್ವಾಂಗ ವಿಕಳರಾಗಿದ್ದ ಧೃತರಾಷ್ಟ್ರ ಗಾಂಧಾರಿಯರ ಚರಣಾರವಿಂದ ವಂದನೆಗೈಯ್ದು ನೀವರು ಮನಕ್ಷೋಭೆಯನ್ನು ಆರಿಸಿಕೊಳ್ಳೋಣವಾಗಲಿ; ಬೀಳ್ಕೊಗೆ ವಿಜಯ ಮಾಡಿರಿ" ಎಂದು ಅಂಗಲಾಚುತ್ತಾನೆ. ಮನೆಯ ನೆನಪಾದಕ್ಷಣ ದುರ್ಯೋಧನನ ನೋವು ನೂರ್ಮಡಿಯಾಗುತ್ತವೆ. "ಯುವರಾಜನನ್ನೂ ಅಂಗರಾಜನನ್ನೂ ಜೊತೆಯಾಗಿ ಕರೆದುಕೊಂಡು ರಣೋತ್ಸಾಹದಿಂದ ಹೋಗಬೇಕೆಂದಿದ್ದೆ ; ಈಗ ಅವರಿಬ್ಬರನ್ನೂ ಕಳೆದುಕೊಂಡು ಮನೆಯವರಿಗೆ ಮೊಗದೋರಲು ನಾಚುವೆನು ', "ಗಂಡಂದಿರನ್ನು ಕಳೆಕೊಂಡು ವಿಕಳರಾಗಿರುವ ವನಿತಾವೃಂದವನ್ನು ನೋಡಲು ನಾಚುವೆನು; ನನ್ನ ಈ ಅವಸ್ಥೆಯಲ್ಲಿ ಮುಖವನ್ನು ಹೇಗೆ ತೋರಲಿ ; ನನ್ನಂತಹ ದುಃಖಿಯಾರು ?" ಎಂದು ತನ್ನ ಸ್ಥಿತಿಗೆ ಸಮ್ರಾಟನಾದ ದುರ್ಯೋಧನ ತಾನೆ ನಾಚುವ ಕರುಣಾಜನಕ ಸ್ಥಿತಿಯನ್ನು ಕಂಡು ಕೊರಗದವರಾರು !

ಇತ್ತ ಅಂಧನೃಪತಿಯೂ ಗಾಂಧಾರಿಯೂ ಶೋಕಾಕುಲಿತ ಚಿತ್ತರಾಗಿ ತಮ್ಮ ಮಗನನ್ನು ಕಾಣಲು ಹಾಗು ಮನೋವ್ಯಥೆಯನ್ನು ನೀಗಿಕೊಳ್ಳಲು ಸಮರರಂಗದತ್ತ ಸುಳಿದು

ಪಡೆ ಪನ್ನೊಂದಕ್ಷೋಹಿಣಿ ।
ಗೊಡೆಯನೆ ಮೂರ್ಧಾಭಿಷಿಕ್ತನಯ್ ಮೂರುಂ ಬೆ ।

ಳ್ಗೊಡೆಯ ನಡುವಿರ್ಪ ನೀನಿ |
ರ್ದೆಡೆಯು ಮನೆಮಗರಿಯದಂತುಟಾದುದೆ ಮಗನೇ ||

"ಹನ್ನೊಂದು ಅಕ್ಷೋಹಿಣಿ ಸೇನೆಗೆ ಅಧಿನಾಯಕನೆ, ಶಾಸ್ತ್ರೋಕ್ತ ವಾಗಿ ರಾಜ್ಯಾಭಿಷೇಕ ಮಾಡಿಸಿಕೊಂಡ ಸುಯೋಧನನೆ; ಮೂರು ಬಿಳಿಗೊಡೆಯ ನಡುವೆ ಮಂಡಿಸಿ ರಾರಾಜಿಸುವ ನಿನ್ನನ್ನು ಹುಡುಕಿ ಹುಡಿಕಿ ಸಾಕಾಯಿತು. ನೀನಿರುವೆಡೆಯಾದರು ತಿಳಿಸುವರಾರು! ನಮಗೂ ನೀನಿರುವ ತಾಣ ಅರಿಯದಂತಾದುದೇ!" ಎಂದು ಮುದುಕರಿಬ್ಬರೂ ಸಂಕಟದಿಂದ ಸೊರಗಿ ತತ್ತರಿಸಿ ಕಾಲೆಳೆದುಕೊಂಡು ಬರುವ ದೃಶ್ಯ ಹೃದಯ ವಿದ್ರಾವಕವಾದುದು!

ತಂದೆತಾಯಿಗಳ ಬರುವನ್ನು ತಿಳಿದಾಕ್ಷಣ ಸುಯೋಧನನ ಗತಿ ಏನಾಗಿರಬಹುದು? ಮಾನನಿಧಿ ಎಷ್ಟು ಸಂಕಟಪಟ್ಟಿರಬಹುದು? ರನ್ನನ ಹಾಕವಿಯನ್ನೇ ಬೆಸಗೊಂಡರೆ ತಿಳಿದೀತು. ಸುಯೋಧನನನ್ನು ಮೂರು ಬೆಳ್ಗೊಡೆಯ ಮಧ್ಯೆ ಮಹಾಕವಿ ಕೂರಿಸಿದ್ದಾನೆ. ಜೈನಧರ್ಮದಲ್ಲಿ ಜಿನೇಂದ್ರನೊಬ್ಬನಿಗೆ ಮಾತ್ರ ಆ ಮರ್ಯಾದೆ ಸಲ್ಲುವುದು. ಸುಯೋಧನನ ಸದ್ಗುಣಗಳಿಗೆ ಮಾರುಹೋಗಿ ಮಹಾಕವಿ ಇಂತೆಸಗಿರಬಹುದು. ತಂದೆ ತಾಯಿಗಳ ಬರುವನ್ನು ತಿಳಿದಾಗ "ಉದ್ಧೃತ ಗೋತ್ರಾಭಿಮುಖಂ ವಜ್ರ ಘಾತಮಾದಂತೆ ಸಿಗ್ಗಾಗಿ ತಲೆಯಂಬಾಗಿ" ನೆರವೆತ್ತಿನಿಂತ ಪರ್ವತಾಗ್ರಹಕ್ಕೆ ವಜ್ರದಪೆಟ್ಟು ತಾಗಿದರೆ ಹೇಗೋ ಹಾಗೆ ದುರ್ಯೋಧನ ನಾಚಿ ತಲೆ ತಗ್ಗಿಸಿದನಂತೆ.

ಕಂದಾ ನಿಜಾನುಜರೆಲ್ಲಿದ |
ರೆಂದೆನ್ನ ಜನನಿಬಂದು ಬೆಸಗೊಂಡೊಡವೇ |
ನೆಂದು ಮರುಮಾತುಗುಡುವೆಂ |
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೋ ||

"ನನ್ನ ತಾಯಿ ಬಂದು ಕಂದ, ನಿನ್ನ ತಮ್ಮಂದಿರೆಲ್ಲಿ ಹೋದರಪ್ಪ ಎಂದು ಕೇಳಿದರೆ ಏನು ಉತ್ತರಗೊಡಲಿ; ಕೌಂತೇಯರು ಅವರನ್ನೆಲ್ಲ ಕೊಂದು ಹಾಕಿದರು ಎನ್ನಲೇ!" ಶೋಕ ಹೆಚ್ಚಾಗಿ ಸುಯೋಧನ ಮೂರ್ಛೆ ಹೋದನಂತೆ. ಈ ಸನ್ನಿವೇಶದಲ್ಲಿ ನಾವೆಲ್ಲ ಮೂಕನೋವನ್ನನುಭವಿಸ

ಬೇಕಾಗುತ್ತದೆ. ರಸೋದ್ರೇಕಗೊಂಡ ರನ್ನಮಹಾಕವಿ ತೆರೆತೆರೆಯಾಗಿ ಶೋಕರಸವನ್ನು ಹರಿಸಿದಾನೆ. ದುರ್ಯೋಧನ ಎದೆಯಲ್ಲಿ ಮಾನವ ಸಹಜವಾದ ಕರುಣೆ, ದಯೆ, ಶೋಕ, ಸಂಕಟಗಳನ್ನು ತುಂಬಿ ಆತನಿಗಾಗಿ ಸಹೃದಯರೆಲ್ಲ ಮಾರುಹೋಗುವಂತೆ ಮಾಡಿದ್ದಾನೆ. ಸಾಹಸಧನ ಮೂರ್ಛೆಯಲ್ಲಿ ಮುಳುಗಿದ! ಮಾನನಿಧಿ ಮೈಮರೆದು! ದುರ್ಯೋಧನ ದುಃಖದಲ್ಲೊಂದಾಗಿ ಹೋದ! ಈ ದಾರುಣಮಯ ಸನ್ನಿವೇಶದಲ್ಲಿ ಸಹೃದಯರು ಪರಿತಪಿಸಿ ಪರಿತಪಿಸಿ ಪನ್ನಗಕೇತನಿಗಾಗಿ ಕೊರಗದಿರಲಾದೀತೆ. ಆ ಮಹಾನುಭಾವ ಎಚ್ಚರಗೊಳ್ಳುವತನಕ ನಮ್ಮ ತವಕವನ್ನು ಪರಿಹರಿಸುವರಾರು?

---

ನಿದ್ರೋಷಿ ಬಳಿಕ್ಕೆಯುಮನೊಳ್ ಪುದುವಾಳ್ವೆಂ ।

---

ಮೂರ್ಛೆಹೋದ ಸುಯೋಧನನಿಗೆ ಸಂಜಯು ಶಿಶಿರೋಪಚಾರವೆಸಗುತ್ತಿರುವುದನ್ನು ಧೃತರಾಷ್ಟ್ರ ಗಾಂಧಾರಿಯು ಜೊತೆಯಾಗಿ ಬರುತ್ತಿದ್ದ ಪರಿಜನ ಕಂಡು ದುಃಖಗೊಂಡು ಮಾತಾಪಿತೃಗಳಿಗರಿಪಲು ಗಾಂಧಾರಿಯ ಹೃದಯ ಸೀಳಿದಂತಾಗಿ "ಮಗನ ಲಯಕಾಲ ಭೀಮೋರಗನ್ ಉರಗಪತಾಕ, ನಿನ್ನುಮಂ ನುಂಗಿದನೆ!" ಎಂದು ಅಬ್ಬರಿಸುವ ಮಾತು ಸಂದರ್ಭಕ್ಕೆ ಉಚಿತವಾಗಿದೆ. ಎಷ್ಟೋ ಮಕ್ಕಳ ಸಾವನ್ನು ಆಕೆ ಕಂಡುದಾಯಿತು; ರಣರಂಗಕ್ಕೆ ಹೋದ ಕೂಸುಗಳಲ್ಲಿ ಒಬ್ಬನಾದರೂ ಬದುಕಿ ಹಿಂದಿರುಗಲಿಲ್ಲ. ಇದರ ಜೊತೆಗೆ ಎಲ್ಲರನ್ನೂ ಕೊಂದು ಭೀಮನೆಂದು ಅವರಿಗೂ ಗೊತ್ತು; ದುರ್ಯೋಧನನನ್ನೂ ಸತ್ತನೆಂದುಕೊಂಡೇ ಗಾಂಧಾರಿ ಗೋಳಾಡುವಳು. ಭೀಮಸೇನ ಅಂತ್ಯಕಾಲದಲ್ಲಿ ಕಾಣಿಸಿಕೊಳ್ಳುವ ಸರ್ಪನಂತೆ; ಎಲ್ಲರನ್ನೂ ಕೊಂದಾಗ್ಯೂ ಪನ್ನಗ ಕೇತನನ್ನಾದರೂ ಆ ಲಯಕಾಲದ ಭೀಮೋರಗ ಉಳಿಸಲಿಲ್ಲವೇ ಎಂದುಕೊಂಡು ಮಮ್ಮಲ ಮರುಗಿದ್ದಾಳೆ. ಭೀಮನು ಅವಾಂತರದಲ್ಲಿ ಒಬ್ಬನೂ ಉಳಿಯುವಂತಿಲ್ಲವೆಂದುಕೊಂಡು ಸಂಕಟಪಟ್ಟಿದ್ದಾಳೆ.

ಳ್ಗೊಡೆಯ ನಡುವಿರ್ಪ ನೀನಿ ।
ರ್ದೆಡೆಯು ಮನೆಮಗರಿಯದಂತುಟಾದುದೆ ಮಗನೇ ॥

"ಹನ್ನೊಂದು ಅಕ್ಷೋಹಿಣಿ ಸೇನೆಗೆ ಅಧಿನಾಯಕನೆ, ಶಾಸ್ತ್ರೋಕ್ತವಾಗಿ ರಾಜ್ಯಾಭಿಷೇಕ ಮಾಡಿಸಿಕೊಂಡ ಸುಯೋಧನನೆ; ಮೂರು ಬಿಳಿಗೊಡೆಯ ನಡುವೆ ಮಂಡಿಸಿ ರಾರಾಜಿಸುವ ನಿನ್ನನ್ನು ಹುಡುಕಿ ಹುಡಿಕಿ ಸಾಕಾಯಿತು. ನೀನಿರುವೆಡೆಯಾದರು ತಿಳಿಸುವರಾರು! ನಮಗೂ ನೀನಿರುವ ತಾಣ ಅರಿಯದಂತಾದುದೇ!" ಎಂದು ಮುದುಕರಿಬ್ಬರೂ ಸಂಕಟದಿಂದ ಸೊರಗಿ ತತ್ತರಿಸಿ ಕಾಲೆಳೆದುಕೊಂಡು ಬರುವ ದೃಶ್ಯ ಹೃದಯ ವಿದ್ರಾವಕವಾದುದು!

ತಂದೆತಾಯಿಗಳ ಬರುವನ್ನು ತಿಳಿದಾಕ್ಷಣ ಸುಯೋಧನನ ಗತಿ ಏನಾಗಿರಬಹುದು? ಮಾನನಿಧಿ ಎಷ್ಟು ಸಂಕಟಪಟ್ಟಿರಬಹುದು? ರನ್ನಮಹಾಕವಿಯನ್ನೇ ಬೆಸಗೊಂಡರೆ ತಿಳಿದೀತು. ಸುಯೋಧನನನ್ನು ಮೂರು ಬೆಳ್ಗೊಡೆಯ ಮಧ್ಯೆ ಮಹಾಕವಿ ಕೂರಿಸಿದ್ದಾನೆ. ಜೈನಧರ್ಮದಲ್ಲಿ ಜಿನೇಂದ್ರನೊಬ್ಬನಿಗೆ ಮಾತ್ರ ಆ ಮರ್ಯಾದೆ ಸಲ್ಲುವುದು. ಸುಯೋಧನನ ಸದ್ಗುಣಗಳಿಗೆ ಮಾರುಹೋಗಿ ಮಹಾಕವಿ ಇಂತೆಸಗಿರಬಹುದು. ತಂದೆತಾಯಿಗಳ ಬರುವನ್ನು ತಿಳಿದಾಗ "ಉದ್ಧೃತ ಗೋತ್ರಾಭಿಮುಖಂ ವಜ್ರಘಾತಮಾದಂತೆ ಸಿಗ್ಗಾಗಿ ತಲೆಯಂಬಾಗಿ" ನೆರವೆತ್ತಿಸಿಂತ ಪರ್ವತಾಗ್ರಹಕ್ಕೆ ವಜ್ರದಪೆಟ್ಟು ತಾಗಿದರೆ ಹೇಗೋ ಹಾಗೆ ದುರ್ಯೋಧನ ನಾಚಿ ತಲೆತಗ್ಗಿಸಿದನಂತೆ.

ಕಂಡಾ ನಿಜಾನುಜರೆಲ್ಲಿದ ।
ರೆಂದೆನ್ನ ಜನನಿಬಂದು ಬೆಸಗೊಂಡೊಡವೇ ।
ನೆಂದು ಮರುಮಾತುಗುಡುವೆಂ ।
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೋ ॥

"ನನ್ನ ತಾಯಿ ಬಂದು ಕಂದ, ನಿನ್ನ ತಮ್ಮಂದಿರೆಲ್ಲಿ ಹೋದರಪ್ಪ ಎಂದು ಕೇಳಿದರೆ ಏನು ಉತ್ತರಗೊಡಲಿ; ಕೌಂತೇಯರು ಅವರನ್ನೆಲ್ಲ ಕೊಂದು ಹಾಕಿದರು ಎನ್ನಲೇ!" ಶೋಕ ಹೆಚ್ಚಾಗಿ ಸುಯೋಧನ ಮೂರ್ಛೆಗೋದನಂತೆ. ಈ ಸನ್ನಿವೇಶದಲ್ಲಿ ನಾವೆಲ್ಲ ಮೂಕನೋವನ್ನನುಭವಿಸ

ಬೇಕಾಗುತ್ತದೆ. ರಸೋದ್ರೇಕಗೊಂಡ ರನ್ನಮಹಾಕವಿ ತೆರೆತೆರೆಯಾಗಿ ಶೋಕರಸವನ್ನು ಹರಿಸಿದಾನೆ. ದುರ್ಯೋಧನ ಎದೆಯಲ್ಲಿ ಮಾನವ ಸಹಜವಾದ ಕರುಣೆ, ದಯೆ, ಶೋಕ, ಸಂಕಟಗಳನ್ನು ತುಂಬಿ ಆತನಿಗಾಗಿ ಸಹೃದಯರೆಲ್ಲ ಮಾರುಹೋಗುವಂತೆ ಮಾಡಿದ್ದಾನೆ. ಸಾಹಸಧನ ಮೂರ್ಛೆಯಲ್ಲಿ ಮುಳುಗಿದ ! ಮಾನನಿಧಿ ವ್ಯೆಮರೆದು ! ದುರ್ಯೋಧನ ದುಃಖದಲ್ಲೊಂದಾಗಿ ಹೋದ ! ಈ ದಾರುಣಮಯ ಸನ್ನಿವೇಶದಲ್ಲಿ ಸಹೃದಯರು ಪರಿತಪಿಸಿ ಪರಿತಪಿಸಿ ಪನ್ನಗಕೇತನಿಗಾಗಿ ಕೆವರಗದಿರಲಾದೀತೆ. ಆ ಮಹಾನುಭಾವ ಎಚ್ಚರಗೊಳ್ಳುವತನಕ ನಮ್ಮ ತವಕವನ್ನು ಪರಿಹರಿಸುವರಾರು ?

---

ಸಿದೋರ್ೀಷಿ ಬಳಿಕ್ಕೆಯುಮುಸೊಳ್ ಪುದುವಾಳ್ವೆಂ ।

---

ಮೂರ್ಛೆಹೋದ ಸುಯೋಧನನಿಗೆ ಸಂಜಯ ಶಿಶಿರೋಪಚಾರವೆಸಗುತ್ತಿರುವುದನ್ನು ಧೃತರಾಷ್ಟ್ರ ಗಾಂಧಾರಿಯ ಜೊತೆಯಾಗಿ ಬರುತ್ತಿದ್ದ ಪರಿಜನ ಕಂಡು ದುಃಖಗೊಂಡು ಮಾತಾಪಿತೃಗಳಿಗರಿಪಲು ಗಾಂಧಾರಿಯ ಹೃದಯ ಸೀಳಿದಂತಾಗಿ “ಮಗನೆ ಲಯಕಾಲ ಭೀಮೋರಗನ್ ಉರಗಪತಾಕ, ನಿನ್ನುಮಂ ನುಂಗಿದನೆ !'' ಎಂದು ಅಬ್ಬರಿಸುವ ಮಾತು ಸಂದರ್ಭಕ್ಕೆ ಉಚಿತವಾಗಿದೆ. ಎಷ್ಟೋ ಮಕ್ಕಳ ಸಾವನ್ನು ಆಕೆ ಕಂಡುದಾಯಿತು; ರಣರಂಗಕ್ಕೆ ಹೋದ ಕೂಸುಗಳಲ್ಲಿ ಒಬ್ಬನಾದರೂ ಬದುಕಿ ಹಿಂದಿರುಗಲಿಲ್ಲ. ಇದರ ಜೊತೆಗೆ ಎಲ್ಲರನ್ನೂ ಕೊಂದು ಭೀಮನೆಂದು ಅವರಿಗೂ ಗೊತ್ತು ; ದುರ್ಯೋಧನನನ್ನೂ ಸತ್ತನೆಂದುಕೊಂಡೇ ಗಾಂಧಾರಿ ಗೋಳಾಡುವಳು. ಭೀಮಸೇನ ಅಂತ್ಯಕಾಲದಲ್ಲಿ ಕಾಣಿಸಿಕೊಳ್ಳುವ ಸರ್ಪನಂತೆ; ಎಲ್ಲರನ್ನೂ ಕೊಂದಾಗ್ಯೂ ಪನ್ನಗ ಕೇತನನ್ನಾದರೂ ಆ ಲಯಕಾಲದ ಭೀಮೋರಗ ಉಳಿಸಲಿಲ್ಲವೇ ಎಂದುಕೊಂಡು ಮಮ್ಮಲ ಮರುಗಿದ್ದಾಳೆ. ಭೀಮನು ಅವಾಂತರದಲ್ಲಿ ಒಬ್ಬನೂ ಉಳಿಯುವಂತಿಲ್ಲವೆಂದುಕೊಂಡು ಸಂಕಟಪಟ್ಟಿದ್ದಾಳೆ.

ಎಮಗಂಧಯುಕ್ತಿಯಾಗಿ |
ರ್ದೆಮಗನೆ ನೀನುಳ್ಳೊಡೆಲ್ಲರೊಳರೆಂದೀ ನಿ |
ನ್ನುಮ ನಿರಿಸುದೆ ಕುರುವಂಶಾ |
ನಿಮಿತ್ತರಿಪು ಪಾಶಪಾಣಿ ಸವಿನೋಡಿದನೇ

ಮುದಕರಾದ ನಮಗೆ ಊರೆಗೋಲಂತಿದ್ದೆಲ್ಲೋ ಮಗನೆ! ನೀನೊಬ್ಬನಿದ್ದಿದ್ದರೆ ಸಾಕಾಗಿತ್ತು. ಎಲ್ಲರೂ ಇದ್ದಹಾಗೆ ಎಂದುಕೊಂಡು ಹಾಯಾಗಿರುತ್ತಿದ್ದೆವು; ನಿಷ್ಕಾರಣವಾಗಿ ಕುರುವಂಶದಮೇಲೆ ದ್ವೇಶಸಾಧಿಸಿ ಯಮ ನಿನ್ನನ್ನೂ ಕೊಂದು ಸವಿದನೇನು, ಇಲ್ಲಿ "ಕುರುವಂಶಾನಿಮಿತ್ತರಿಪು ಪಾಶಪಾಣಿ" ಎಂಬ ಮಾತನ್ನು ಭೀಮನಿಗೂ ಅನ್ವಯಿಸಿಕೊಳ್ಳಬಹುದು. ದುಶ್ಯಾಸನನ್ನು ಅವನ ಬಿಸಿನೆತ್ತರನ್ನು ಹಿಂದೆ ಭೀಮ ಸವಿನೋಡಿರುವುದನ್ನು ಗಾಂಧಾರಿ ಮರೆತಿಲ್ಲ; ಮರೆಯಲಾರಳು; ಅಂತೆ ಈಗಲೂ ಆ ಭೀಮನೆ ಸುಯೋಧನನನ್ನು ಕೊಂದಿರಬಹುದೆಂದುಕೊಂಡು ಪ್ರಲಾಪಿಸುತ್ತಾಳೆ. "ಗುರು ವಿನಯಮನೇಕೆ ಮರೆದೆ ಕುರು ಕುಲತಿಲಕಾ!" ದುರ್ಯೋಧನನ ಪಾತ್ರದ ಘನತೆಯನ್ನು ಅವನ ಬಾಳ್ವಿಕೆಯ ಬೆಳಕನ್ನೂ ಗಾಂಧಾರಿಯ ಈ ಒಂದು ವಾಕ್ಯದಲ್ಲಿ ಅಳೆಯಬಹುದು. ಹಿಂದೆಂದೂ ಈತ ವಿನಯವನ್ನೂ ಗುರು ಜನಗಳಲ್ಲಿ ಭಕ್ತಿಯನ್ನೂ ಮರೆತವನಲ್ಲ.

ಮಡಿದೀ ದುಶ್ಯಾಸನನೇಂ |
ನುಡಿಯಿಸುವನೊ! ಕುರುನರೇಂದ್ರ, ದುರ್ಮರ್ಷಣನೇಂ ||
ನುಡಿಯಿಸುವನೊ! ದುಷ್ಕರ್ಣಂ |
ನುಡಿಯಿಸುವನೊ! ನೀನುಮುಸಿರದಿರ್ಪುದೆ ಮಗನೇ ||

ಸತ್ತುಹೋದ ದುಶ್ಯಾಸನ ನಮ್ಮೊಡನೆ ಇನ್ನು ಮಾತಾಡುವಂತಿದೆಯೆ! ದುರ್ಮರ್ಷಣನೂ ಹೋದ: ಅವನೂ ಮಾತಾಡಲಾರ! ದುಷ್ಕರ್ಣನ ಗತಿಯೂ ಅದೆ! ಹೀಗಿರುವಾಗ ಸುಯೋಧನ, ನೀನು ನಮ್ಮೊಡನೆ ಮಾತಾಡದಿರುವುದು ಸರಿಯೆ!" ನೂರು ಜನ ಮಕ್ಕಳನ್ನು ಕಳೆಕೊಂಡ ಗಾಂಧಾರಿಯ ಕರುಳು ಕರಗಿ ನೀರಾಗಿ ಹರಿಯುತ್ತಿರುವ ದಾರುಣವಾಯ ಸನ್ನಿವೇಶಕ್ಕೆ ಮಹಾಕವಿ ನಮ್ಮನ್ನು ಸೆಳೆದಿದ್ದಾನೆ. ನಾವೂ ತಾಯ್ಗರ ಶೋಕವನ್ನು ಕಂಡು ಮಮ್ಮಲ ಮರುಗುತ್ತೇವೆ. ಈ ಶೋಕದಲ್ಲೇ

ಮಾತೃವಿನ ಮಮತೆಯೂ ಅಡಗಿದೆ. ಮಾತೃಪ್ರೇಮ ಶೋಕವಾಗಿ ಮಾರ್ಪಟ್ಟುದನ್ನು ಸಹೃದಯರು ಕಣ್ಣೀರಿಡುವಂತೆ ಚಿತ್ರಿಸಿ ಕೃತಕೃತ ನಾಗಿದ್ದಾನೆ.

ದುರ್ಯೋಧನನ ಕಾಲಮೇಲೆ ಧೃತರಾಷ್ಟ್ರ ಕವಿದುರುಳಿ ಪ್ರಲಾಪಿಸುವ ಸಂದರ್ಭ ಹೃದಯ ವಿದ್ರಾವಕವಾದುದು! "ನಿನ್ನುಮಂ ಪರಲೋಕಕಟ್ಟಿದನೆ ಕಾಯ್ದುಮಾಯ್ದ ವಿಧಾತ್ರಂ!" ಅಂಧನೃಪತಿ ಮಗನನ್ನು ತಡವಿ ನೋಡುತ್ತಾ ಕಣ್ಣೀರು ಸುರಿಸುತ್ತಿರುವನು.

ಕುರುಕುಲ ಚೂಡಾಮಣಿ ನಿಜ |
ಗುರುಜನ ನಯನಾಂಬು ತಳಿವಜಲಮಾಗಿರೆ ತ ||
ದ್ಗುರುಜನ ದೀರ್ಘನಿಶ್ವಾಸಮೆ |
ಪರಿವೀಜನಮಾಗೆ ಮೂರ್ಛೆಯಿಂದೆಚ್ಚತ್ತಂ ||

"ತನ್ನ ತಂದೆ ತಾಯಿಗಳು ಸುರಿವ ಕಣ್ಣೀರು ಚಿಮುಕಿಸುವ ಪನ್ನೀರಾಗಿ, ಆ ಹಿರಿಯರ ನಿಟ್ಟುಸಿರೆ ಬೀಸಣಿಗೆಯ ಬೀಸಾಟವಾಗಿ ಕುರುಕುಲ ಚೂಡಾಮಣಿ ಮೈತಿಳಿದೆದ್ದ" ಸಂದರ್ಭವನ್ನು ಕಲಾಯುಕ್ತವಾಗಿ ರನ್ನ ನಿರೂಪಿಸಿದಾನೆ. ಸಂಜಯನ ಶೈತ್ಯೋಪಚಾರ ಮೈಮರೆದಿರ್ದ ದುರ್ಯೋಧನನನ್ನುಲುಗಿಸಲಾರದೇ ಹೋಯಿತು. ಜನನೀಜನಕರ ಪ್ರೇಮ ಬಳಿ ಸಾರಿದಾಕ್ಷಣ, ಅವರ ಬಿಸಿಯುಸಿರು ತಾಕಿದ ಕೂಡಲೆ ಸತ್ಪುತ್ರನಾದ ದುರ್ಯೋಧನ ಮೈತಿಳಿದನೆಂದು ಹೇಳಿ ಮಹಾಕವಿ ಮಾತೃಪ್ರೇಮಕ್ಕೆ ಕಳಶವಿಟ್ಟಿದಾನೆ. ಮೇಲಿದ್ದ ತನ್ನ ಜನನೀಜನಕರನ್ನು ಕಂಡು ಲಜ್ಜಾಭರದಿಂದ ತಲೆಬಾಗಿದನಂತೆ! ಗಾಂಧಾರಿ ಧೃತರಾಷ್ಟ್ರರಿಗೆ ಸುಯೋಧನ ತಲೆಬಾಗಿದ್ದನ್ನು ಸಂಜಯ ತಿಳಿದಾಕ್ಷಣ ಅವರಿಬ್ಬರು ತಡವರಿಸಿ, ತೆಬ್ಬರಿಸಿ ಮಗನನ್ನು ಅಪ್ಪಿಕೊಂಡು ನಿರಾಶನಾಗಿದ್ದ ದುರ್ಯೋಧನನನ್ನು ಪರಮಾಶೀರ್ವಚನ ಶತಸಹಸ್ರಗಳಿಂದ ಹರಸಿ ಮತ್ತೆ ಮತ್ತೆ ಅಪ್ಪಿಕೊಂಡರಂತೆ. ಸುತ್ತಲೂ ಇದ್ದ ಸೇವಕರನ್ನು ಮರೆಗೆ ಕಳಿಸಿ ಮನಬಿಚ್ಚಿ ಮಗನೊಡನೆ ನುಡಿವ ಸಂದರ್ಭ ಕರುಣಾಜನಕವಾದುದು!

ಯಮಸುತನಿಂಬುಕೆಯ್ವನೆಮಗಿನ್ನು ಮೊಡಂಬಡು ಕಂದ ಸಂಧಿಯಂ |
ಸಮಗೊಳಿಸಲ್ಕೆ ಸಂಜಯನನಟ್ಟುವೆ ಭೀಮನೊಳಾದ ಬದ್ಧವೈ |

ರಮುನುಳಿ ನೋಡದಿರ್ ಸುತಸಹೋದರ ದುಃಖಮುನೀ ನೃದರ್ಶರಾ ||
ಜ್ಯಮನವರ್ಗೆಂದು ಕಾಲ್ವಿಡಿದು ಬೇಡಿದನಂಧನೃಪಾಲ ಪುತ್ರನಂ ||

ಇನ್ನೂ ಧರ್ಮರಾಯ ನಮ್ಮ ಮಾತಿಗೊಡಂಬಡುತ್ತಾನೆ; ಮಗು ಸಂಧಿಕಾರ್ಯಕ್ಕಾಗಿ ಈಗಲೇ ಸಂಜಯನನ್ನು ಕಳಿಸಿಕೊಡುವೆನು; ಭೀಮನ ಮೇಲಿನ ಬದ್ಧದ್ವೇಷವನ್ನು ಮರೆತುಬಿಡಪ್ಪ ಕಂದ; ನಿನ್ನ ಸಹೋದರರಳಿವನ್ನೂ ಮಕ್ಕಳ ಸಾವನ್ನೂ ಚಿಂತಿಸದೆ ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟುಬಿಡು; ಎಂದು ಮಗನ ಕಾಲನ್ನು ಹಿಡಿದು ಬೇಡುವ ತಂದೆಯನ್ನು ನೆನೆದು ಮರುಗದ ವಾಚಕನುಂಟೆ! "ಭೀಮನೊಳಾದ ಬದ್ಧವೈರವನುಳಿ" ಎಂದು ಅವರಕ್ಕೈಲಿ ರನ್ನ ಒತ್ತಿನುಡಿಸಿ ಭೀಮದುರ್ಯೋಧನರ ನಡುವಣ ದ್ವೇಷಾನಲದ ಪೂರ್ಣಚಿತ್ರವನ್ನು ಪರಿಣಾಮಕಾರಿಯಾಗಿ ಚಿತ್ರಿಸಿದಾನೆ. ಸೂಕ್ಷ್ಮದಲ್ಲೇ ಬೃಹದ್‌ಚಿತ್ರವನ್ನು ತನ್ನ ಪ್ರತಿಭಾ ಕುಂಚದಲ್ಲಿಬಿಡಿಸುವ ಅಲೌಕಿಕ ವ್ಯಕ್ತಿ ರನ್ನಮಹಾಕವಿ !

ಧೃತರಾಷ್ಟ್ರ ಮಾತುಮುಗಿಸುವ ಮುನ್ನವೇ ಗಾಂಧಾರಿ ದೀನಳಾಗಿ ಮಗನನ್ನು ನೋಡುತ್ತಾ "ಪರಿಣತವಯಸರೆಂ ಇರ್ಕಣ್ಗುರುಡರೆಂ ಎಮಗಿಂಬುಕೆಯ್ವುದುಚಿತಂ"

ಸಮರವ್ಯಾಪಾರಂ ಮಾ।
ಣ್ದು ಮಗನೆ ನಿಜಶಿಬಿರದತ್ತ ಬಿಜಯಂಗೆಯ್ ಸ।
ತ್ತ ಮಗಂದಿರ್ ಸತ್ತರ್ ನೀ।
ನೆಮಗುಳ್ಳೊಡೆ ಸಾಲ್ವುದವರನಿಂ ತಂದಪೆವೇ ||

"ಮಗೂ, ನಾವಿಬ್ಬರೂ ಮುದುಕರು; ಎರಡು ಕಣ್ಣುಹಿಂಗಿದವರು; ನಮ್ಮ ಮಾತಿಗೊಡಂಬಡುವುದೇ ಲೇಸು; ಸಮರವ್ಯಾಪಾರವನ್ನು ತೊರೆ; ಶಿಬಿರಕ್ಕೆ ನಡೆ ಹೋಗೋಣ; ಸತ್ತಮಕ್ಕಳುಸತ್ತುಹೋದರು; ನೀನೊಬ್ಬನಾದರೂ ಸಾಕು; ಹೋದವರು ಮತ್ತೆ ಬಂದಾರೆ" ಗಾಂಧಾರಿಯ ಗೋಳಾಟ ಕಲ್ಲೆದೆಯನ್ನೂ ಕರಗಿಸುವಂತೆ ಮಹಾಕವಿ ನಿರೂಪಿಸಿದಾನೆ.

ದುರ್ಯೋಧನ ಪರಾಭವದ ಅಪಮಾನದಿಂದ ತತ್ತರಿಸಿ ಹೋಗಿದಾನೆ; ತನ್ನವರ ಸಾವಿನಿಂದ ಕೊರಗಿ ಬಳಲಿದ್ದಾನೆ. ಇಂಥ ವನಿದಿರು ಗಾಂಧಾರಿ ಗೋಳಾಡುವುದು ಸರಿಯಲ್ಲವೆಂದು ಸಂಜಯ ಆಕೆಯನ್ನು

ಸುಮ್ಮನಿರಿಸುತ್ತಾನೆ. ಆದರೂ ಅಂಧನೃಪತಿಗೆ ಸಂಕಟ ಮತ್ತೊಮ್ಮೆ ಮರುಕಗೊಳಿಸುವುದು. ಒಮ್ಮೆ ಗಾಂಧಾರಿಯನ್ನು ನೆನೆದು, ಮತ್ತೊಮ್ಮೆ ಮಕ್ಕಳ ಸಾವನ್ನು ಚಿಂತಿಸಿ ಕಂಬನಿ ಮಿಡಿಯುತ್ತಾನೆ.

ವೀರಶತ ಜನನಿಗೀ ಗಾಂ |
ಧಾರಿಗೆ ದುಃಖಶತಜನನಿ ಪೆಸರಾಯ್ತೀಗಳ್ |
ಕೌರವಪತಿ ದುಃಖಮುಮಾ |
ಭಾರಮನಾಂತಾಯುಸಕ್ಕೆ ಗುರಿಯಾದಾದಂ ||

ನೂರು ಜನ ವೀರರನ್ನು ಹಡೆದೆನೆಂದುಕೊಂಡು ಹಿರಿಹಿಗ್ಗಿದ್ದ ಗಾಂಧಾರಿ ಈಗ ನೂರು ಸಂಕಟಗಳನ್ನು ಹೊತ್ತು ತತ್ತರಿಸುವ ತಾಯಿಯಾಗಿದ್ದಾಳೆ. ಒಬ್ಬೊಬ್ಬ ಮಗನೂ ಸತ್ತು ಜನನಿ ಕಣ್ಣೀರಿಡುವಂತಾಗಿದೆ" ಕರುಣಾಜನಕ ಚಿತ್ರವನ್ನು ಮಹಾಕವಿ ಕಣ್ಣೀರಿನಲ್ಲಿ ಬರೆದಿದಾನೆ.

"ಮಗು, ಧರ್ಮರಾಯನ ಪ್ರತಿಜ್ಞೆ ಗೊತ್ತೆ; ತನ್ನ ತಮ್ಮಂದಿರ ನಾಲ್ವರಲ್ಲಿ ಒಬ್ಬ ಸತ್ತರೂ ತಾನು ಸಾಯುವುದಾಗಿ ಪ್ರತಿಜ್ಞೆ ಕೊಟ್ಟದಾನೆ; ಅದರಿಂದ ಇಂದೂ ಆತ ಸಂಧಿಗೊಡಂಬಡುತ್ತಾನೆ. ಯುದ್ಧದ ಫಲಿತಾಂಶ ಏನಾದೀತೋ ಎಂಬ ಭಯ, ಸಂದೇಹ ಆತನಿಗೂ ಉಂಟು" ಧೃತರಾಷ್ಟ್ರನ ನುಡಿಯನ್ನು ಕೇಳಿ "ಹೌದು, ಹಿತವಚನಗಳಿವು; ಸುಯೋಧನ ಈ ಮಾತಿಗೊಡಂಬಡು" ಎಂದು ಸಂಜಯ ಅಂಗಲಾಚಿದಾಗ ಸಾಹಸಧನನ ಸ್ವಾಭಿಮಾನ ಹೆಡೆಯೆತ್ತಿತು.

ತನ್ನೊಡವುಟ್ಟಿದರ್ ಪೆಸರ ನಾಲ್ವರೊಳೊರ್ವರು ಮಿಲ್ಲದಿರ್ದೊಡಂ |
ತನ್ನಸುವಂ ನಿವೇದಿಪುನನಗ್ನಿಗೆ ಧರ್ಮತನೂಜನೆಂದೊಡಾ |
ನೆನ್ನೊಡವುಟ್ಟಿದರ್ ಪೆಸರನೂರ್ವರೊಳೊರ್ವರುಮಿಲ್ಲ ಬಾಳ್ವೆನೆಂ |
ಬಳಿಯಾಸೆಯಂ ಬಿಸುಡಿಮೆನ್ನೆವರಾದುದನಾಗ ದಿರ್ಪನೇ ||

ತನ್ನ ತಮ್ಮಂದಿರಲ್ಲಿ ಒಬ್ಬ ಸತ್ತರೆ ತಾನು ಅಗ್ನಿ ಪ್ರವೇಶ ಮಾಡುವುದಾಗಿ, ಧರ್ಮರಾಯ ಪಣತೊಟ್ಟಿರುವಾಗ ನನ್ನ ಸಹೋದರರಲ್ಲಿ ನೂರು ಜನರಲ್ಲಿ ಎಲ್ಲರನ್ನೂ ಕಳೆಕೊಂಡೆ; ಎಲ್ಲರೂ ಹೇಳ ಹೆಸರಿಲ್ಲದಂತಾದರೂ; ಅಷ್ಟು ಜನದಲ್ಲಿ ಒಬ್ಬನಾದರೂ ಉಳಿದಿಲ್ಲ; ಹೀಗಿರುವಾಗ ಮತ್ತೆ ಸುಯೋಧನ ಬಾಳಿ ಬದುಕಬಹುದೆಂಬ ಅಳಿಯಾಸೆಯನ್ನು ಮೊದಲು ತೊರೆಯಿರಿ;

ಅವರಾದುದನ್ನು ನಾನೂ ಆಗದಿದ್ದೇನೆ; ಅವರಿಗೆ ಬಂದುದು ನನಗೂ ಇರಲಿ" ಅಸಹಾಯ ಶೂರನ ವೀರೋಚಿತವಚನ ಸಾಹಸಧನನ ಸತ್ಸಂಕಲ್ಪ !

ಸಾಧಿಸುವೆಂ ಫಲ್ಗುಣನಿಂ ।
ಸಾಧಿಸುವೆಂ ಪವನಪುತ್ರನ ಬಸಿರಿಂ ಹಾ ಕ ।
ರ್ಣಾ ದುಶ್ಶಾಸನ ತೆಗೆವೆಂ ।
ನಿರ್ದೋಷಿ ಬಳಿಕ್ಕೆ ಯಮಜನೊಳ್ ಪುದುವಾಳ್ವೆಂ ॥

"ಅರ್ಜುನನನ್ನು ಇದಿರಿಸಿ ಅವನ ಬಸಿರಿಂದ ಕರ್ಣನನ್ನು ಸೆರೆ ಬಿಡಿಸುವೆನು; ಭೀಮನ ಬಸಿರನ್ನು ಬಗೆದು ದುಶ್ಶಾಸನನನ್ನು ಹೊರಗೆಳೆಯುವೆನು. ಇಷ್ಟಾದಮೇಲೆ ನಿರ್ದೋಷಿಯಾದ ಧರ್ಮರಾಯನೊಡನೆ ಸಂಧಿಮಾಡಿಕೊಳ್ಳುವೆನು." ಇಲ್ಲಿ ಕರ್ಣದುಶ್ಶಾಸನರ ಮೇಲೆ ದುರ್ಯೋಧನನಿಗಿರುವ ಅಪಾರಪ್ರೇಮವನ್ನೂ ಭೀಮಾರ್ಜುನರ ಮೇಲೆ ಸಾಹಸಧನನಿಗಿರುವ ಎಂದೂ ಸವೆಯದ ಹಗೆತನವನ್ನೂ ಒಂದೇ ಚಿತ್ರದಲ್ಲಿ ಮಹಾಕವಿ ಬಿಡಿಸಿ ಸ್ಪಷ್ಟಪಡಿಸಿದಾನೆ. ಜೊತೆಗೆ ಮಾನಸಿಥಿಯ ಚಲ ಎಂದೆಂದಿಗೂ ಅಚಲನೆಂದು ಸಾರಿದ್ದಾನೆ; ವೀರರಸ ಎತ್ತೆತ್ತಲೂ ಚಿಮ್ಮುವಂತೆ ಮಾಡಿದಾನೆ.

"ಭೂಮಿಯನ್ನು ನೀನೂ ಪಾಂಡುರಾಜನೂ ಇಬ್ಭಾಗಿಸಿಕೊಂಡು ಆಳಿದಿರಿ. ಪಾಂಡವರ ರಾಜ್ಯವನ್ನು ಮೋಸದಿಂದ ನಾನು ಕಸಿದುಕೊಂಡೆ. ಮತ್ತೆ ಅವರಿಗೆ ರಾಜ್ಯವಾಳಲು ಅವಕಾಶ ಕೊಡಲಾರೆ."

ಆಂ ಮಗನೆನಾಗೆ ಧರ್ಮಜ ।
ನೇಂ ಮಗನಲ್ಲನೆ ಬಳಿಕ್ಕೆ ನೀಮುಂತಾಮುಂ ॥
ನಿಮ್ಮೊಳ್ ನೇರ್ಪಡುಗಿಡವೆ ಸು ।
ಖಂ ಮುನ್ನಿನ ತೆರದೆ ಬಾಳ್ವುದಾಂ ಬೆಸಕಯ್ವೆಂ ॥

"ನನ್ನಂತೆ ಧರ್ಮರಾಯನೂ ತಮಗೆ ಮಗನಾಗಿದಾನೆ; ನನ್ನಿಂದ ನಿಮ್ಮಿಬ್ಬರ ನಡುವಣ ಸ್ನೇಹಸೌಹಾರ್ದತೆಗೇಕೆ ಅಡ್ಡಿಬರಬೇಕು; ಮೊದಲನಂತೆ ಹಾಯಾಗಿ ಅವರೊಡನೆ ನೀವು ಬಾಳಿಕೊಂಡಿರಿ"

ಬಿಡಿಮೆನ್ನನೆಂದು ಮುಂದೆ ।
ರ್ದಡಿಗೆರಗಿದ ಮಗನನಪ್ಪಿಕೊಂಡಶ್ರು ಜಲಂ ।

ಗಡಗಡನೆ ಸುರಿಯೆ ನಾಲಗೆ ।
ತಡವಡರೆ ನುಡಿದನಂಘನೃಪನಾ ನೃಪನಂ ॥

ನನ್ನನ್ನು ಬಿಡಿ ಎನ್ನುತ್ತಾ ಜನನೀಜನಕರ ಕಾಲಿಗೆರಗಿದ ಸುಯೋಧನನನ್ನು ಅವರಿಬ್ಬರೂ ಅಪ್ಪಿಕೊಂಡು ಗಡಗಡ ಅಳುತ್ತಾ ಕಂಬನಿ ಮಿಡಿದು ನಾಲಗೆ ತಡವರಿಸುತ್ತಿವೆ. ಗದ್ಗದ ದನಿಯಲ್ಲಿ ಮಗನನ್ನು ಕುರಿತು ನಮ್ಮ ಮಾತು ನಿನಗೊಪ್ಪಿದ್ದರೆ ಛಲವನ್ನು ಮರೆದು ಪಾಂಡವರೊಡನೆ ಕಾದುವುದಾದರೆ ಒಂದು ಕೆಲಸ ಮಾಡಪ್ಪ: ನಿಮ್ಮಜ್ಜ ಭೀಷ್ಮರೊಡನೆ ಯೋಚಿಸಿ ಕಾರ್ಯೋನ್ಮುಖನಾಗು " ಎಂದು ಅಂಗಲಾಚಿದ ಹಿರಿಯರಿಗೆ ಸಮ್ರಾಟನಾದ ದುರ್ಯೋಧನ ಮಹಾಪ್ರಸಾದವೆಂದು ಅದಕೊಪ್ಪಿ ಅವರಿಬ್ಬರನ್ನೂ ಕಳಿಸಿಕೊಟ್ಟನಂತೆ. ದುಃಖಾತಿರೇಕದಿಂದ ಸಾಹಸಧನ ತಂದು ತಾಯಿಗಳ ಮನದ ಕಳವಳವನ್ನು ಇನ್ನೂ ಹೆಚ್ಚುಮಾಡಿದ್ದಾನೆ. ಈ ಸಂದರ್ಭದಲ್ಲಿ ಮುದುಕರಿಬ್ಬರ ಕರುಳುಕರೆಯೂ ಛಲಂದಕಮಲ್ಲನ ಹಟ ಮಾರಿತನವನ್ನು ಕರಗಿಸಲಾರದೆ ಹೋಗಿದೆ. ದುರ್ಯೋಧನ ಛಲದ ಅಚಲಾಗ್ರಕ್ಕೆ ರನ್ನಮಹಾಕವಿ ವಾಚಕರನ್ನೇರಿಸಿದಾನೆ. ಆ ಉನ್ನತ ಶಿಖರವನ್ನೇರಿ ನೋಡಿದವರಿಗೆ ಮಾತ್ರ ದುರ್ಯೋಧನನ ವ್ಯಕ್ತಿತ್ವದ ಪೂರ್ಣಪರಿಚಯ ಸಾಧ್ಯ ! ಭೀಷ್ಮರಾದರೂ ಮಗನ ಮನವನ್ನು ಕದಲಿಸ ಬಹುದೆಂಬ ನಂಬುಗೆಯಿಂದ ಮುದುಕರಿಬ್ಬರು ಮನೆಯಕಡೆ ಕಾಲೆಳೆದು ಕೊಂಡು ಸಾಗುವ ಚಿತ್ರ ಕರುಣಾಜನಕವಾದುದು. ಬಂದ ದಾರಿಗೆ ಸುಂಕ ವಿಲ್ಲವೆಂದುಕೊಂಡು ಅವರಿಬ್ಬರೂ ಮರಳಿದರು. ಇತ್ತ ಸಾಹಸಧನ ಗದಾ ದಂಡವನ್ನು ಹೆಗಲಿಗೇರಿಸಿ ಸಂಗ್ರಾಮರಂಗದಲ್ಲಿ ಭೀಷ್ಮರಿಗಾಗರಿಸಿ ಹೋಗು ತ್ತಿದ್ದಾನೆ. ದುರ್ಯೋಧನ ಎಂದೆಂದಿಗೂ ದುರ್ಯೋಧನನೆ ! ಸ್ವಾಭಿ ಮಾನಿ ಸತ್ತಾನೆ ಹೊರತು ಅಪಹಾಸ್ಯಕ್ಕೆ ಗುರಿಯಾದನೆ !

ಈ ಭಾಗವನ್ನು ರನ್ನಮಹಾಕವಿ ಹೃದಯಂಗಮವಾಗಿ ನಿರೂಪಿಸಿ ದಾನೆ. ಒಂದೆಡೆ ಮಾತಾಪಿತೃಗಳ ಮರುಕದ ಹೊನಲಲ್ಲಿ ವಾಚಕವೃಂದ ವನ್ನು ಕೊಚ್ಚಿಹೋಗುವಂತೆ ಮಾಡಿ ಮತ್ತೊಂದೆಡೆ ಸಾಹಸಧನನ ಛಲದ ಮಹಾಮೇರುವಿನ ತುತ್ತುತುದಿಗಡರಿಸಿ ಅಲ್ಲಿನ ವೀರರಸಭರಿತ ಮಾನಸಿಧಿಯ ಮಾನಸ್ಸರೋವರದಲ್ಲಿ ಮಿಂದೇಳುವಂತೆ ಮಾಡಿದಾನೆ. ಸುಯೋಧನನ

ಚಲವೂ ಒಂದು ಅನುಪಮ ಋತು ಸಂಕಲ್ಪವೆಂದು ಮಹಾಕವಿ ಸಾರಿದಾನೆ !

---

## ಎಂತು ಮರೆವಂ ದುರ್ಯೋಧನಂ ಕರ್ಣನಂ !

ಕುರುಕ್ಷೇತ್ರದಲ್ಲಿ ಸುಯೋಧನ ಗದೆಯನ್ನು ಹೆಗಲಿಗೇರಿಸಿಕೊಂಡು ಸಾಗಿದ್ದಾನೆ; ಸಂಜಯ ನೆರಳಾಗಿ ಹಿಂಬಾಲಿಸಿದಾನೆ. ರಣರಂಗದಲ್ಲಿ ಇರ್ಕಡೆಯ ಸೇನಾಬಲದ ಬಹುಭಾಗ ಸುತ್ತುರುಳಿದೆ. ನೆತ್ತರು ಕಾಲುವೆ ಗಟ್ಟಿ ಹರಿಯುತ್ತಿದೆ. ರಕ್ತನದಿಯಲ್ಲಿ ಮುರಿದು ಮುಳುಗಿದ್ದ ಆಯುಧಗಳು ದುರ್ಯೋಧನನ ಅಂಗಾಲುಗಳಿಗೆ ಚುಚ್ಚುತ್ತಿರಲು ಯಾವುದನ್ನೂ ಲೆಕ್ಕಿಸಿದೆ ಸಾಹಸಧನ ತನ್ನ ಕಾಲಿಗೆ ತಾಕುತ್ತಿದ್ದ ಹೆಣಗಳನ್ನು ಮೆಟ್ಟಿ ಮೆಲ್ಲನೆ ಸಾಗುತ್ತಿರುವಾಗ ಸಂಜಯ ಸಂಕಟಗೊಂಡು,

ವಿನುತ ವಿರೋಧಿ ಮಂಡಳಿಕ ಮೌಳಿವಿಘಟ್ಟಿತ ಪಾದಪೀಠ ಕಾಂ ।
ಚನ ಕಮಳಾಯ ಮಾನಮಿವು ನಿಮ್ಮಯ ಮೆಲ್ಲಡಿ ಭಿಂಡಿವಾಳದಂ ॥
ಬಿನ ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಚೆ ಸಂಯುಗಾ ।
ವನಿತಳದೊಳ್ ವಿಧಾತೃವಶದಿಂ ನಿಮಗಂ ನಡೆವಂತುಟಾದುದೆ ॥

ಪ್ರಭು, ತಾವು ಸಿಂಹಾಸನದಮೇಲೆ ವಿರಾಜಮಾನರಾಗಿರುವಾಗ ಹೆಸರಾಂತ ಅರಿರಾಜರೆಲ್ಲ ತಮ್ಮ ಪಾದಕಮಲಗಳಿಗೆ ಶಿರಬಾಗಿ ರತ್ನಕಿರೀಟವನ್ನು ತಾಕಿಸಿ ತಣಿಯುತ್ತಿದ್ದ ದೃಶ್ಯ ಎಂದೆಂದಿಗೂ ಮರೆಯಲಾರೆ. ಅಂಥ ನಿಮ್ಮ ಮೃದುವಾದ ಪಾದಕಮಲಗಳು ಇಂದು ಬರ್ಜಿ, ಈಟಿ, ಕೊಂತ ಮುಂತಾದ ಆಯುಧಗಳ ಅಲುಗಿನಿಂದ ಕಚ್ಚಿಸಿಕೊಂಡು ಈ ರಣಭೂಮಿಯಲ್ಲಿ ನಡೆವಂತೆ ದುರವಸ್ಥೆ ಉಂಟಾಯಿತೆ; ನಿಮ್ಮನ್ನೂ ವಿಧಿವಿಲಾಸ ಈ ಸ್ಥಿತಿಗೆ ತಂದಿಟ್ಟಿತೇ '' ಮಮ್ಮಲ ಮರುಗುವನು. ಅಭಿಮಾನಧನ ಸಂಕಟಪಡುತ್ತಿರುವ ಸಂದರ್ಭ ಹೃದಯ ವಿದ್ರಾವಕವಾದರೂ ವೀರರಸದಿಂದ ತುಂಬಿ ತುಳುಕಾಡುತ್ತಿದೆ.

ತನುಜಾನುಜರ ವಿಯೋಗದ ।
ಮನಃಕ್ಷತಂ ನೋಯಿಸಲ್ಕೆ ನೆರೆಯವು ಸಮರಾ ॥

ವನಿಯೊಳುಡಿವಿರ್ದ ಕಯ್ದುಗ ।
ಳಿನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ ॥

"ತಮ್ಮಂದಿರನ್ನೆಲ್ಲಾ ಕಳಕೊಂಡೆ; ಮಕ್ಕಳನ್ನೆಲ್ಲ ಬಲಿಗೊಟ್ಟೆ; ಇಷ್ಟಾದರೂ ನನ್ನ ಹೋರಾಟದ ಸಂಕಲ್ಪ ಇನ್ನೂ ಸದೃಢವಾಗಿದೆ; ಈ ರಣಭೂಮಿಯಲ್ಲಿ ಮಣ್ಣು ಮುಕ್ಕುತ್ತಿರುವ ಈ ಕೈದುಗಳು ನನ್ನ ವಜ್ರೋಪಮ ಮನವನ್ನು ನೋಯಿಸಲು ಸಾಧ್ಯವೆ" ಸಾಹಸಧನನ ವೀರೋಚಿತ ವಾಣಿ ! ಆಯುಧಗಳು ಕೇವಲ ದೇಹಕ್ಕೆ ನೋವೀಯಬಹುದು; ಮನಕ್ಕಾಗುವ ಸಂಕಟವಿದಿರು ಶಾರೀರಕ ಬಾಧೆ ಏನೇನೂ ಅಲ್ಲ; ಹಟಯೋಗಿಯಾದ ಸುಯೋಧನ ಇವೆಲ್ಲಕ್ಕೂ ಅತೀತನಾಗಿದ್ದಾನೆ; ಸುಖದ ತುಟ್ಟತುದಿಯನ್ನೂ ಕಂಡ ಂಡನನು; ಸಂಕಟದ ಅಂತರಾಳಕ್ಕಿಳಿದು ಮುಳುಗೆದ್ದವನಲ್ಲವೆ ರನ್ನನ ಮಾನನಿಧಿ ಸುಯೋಧನ !

ಹೆಜ್ಜೆ ಹೆಜ್ಜೆಗೂ ರಣರಂಗದ ರೌದ್ರತೆ ಭಯಾನಕ ಸ್ವರೂಪವನ್ನು ತಾಳುತ್ತಿದೆ. ರಣರಂಗಕ್ಕೆ ಅಲೌಕಿಕ ಚಲುವೆಯರು ನುಗ್ಗಿ ಸತ್ತ ತಮ್ಮ ಪತಿಗಳನ್ನು ಹುಡುಕಾಡುವ ದೃಶ್ಯ ಮೃತ್ಯುದೇವತೆಯ ವಿಕಟ್ಟಹಾಸದ ಭೀಬತ್ ಸ್ವರೂಪವಾಗಿದೆ. ಈ ನೋಟವನ್ನು ಕಂಡೂ ಕಾಣದಂತೆ ದುರ್ಯೋಧನ ಮುಂದಡಿಯಿಡುತ್ತಿರುವಾಗ ಭೂತಪ್ರೇತಗಳು ಈತನಿಗಿದಿರಾಗಿ ಪರಿಹಾಸ್ಯವೆಸಗುವುವು.

ಗುರುವಿನ ನೆತ್ತರಂ ಕುಡಿವೆನಪ್ಪೊಡವಂ ದ್ವಿಜವಂಶಜಂ ನಿಜಾ ।
ವರಜನ ನೆತ್ತರಂ ಕುಡಿವೆನಪ್ಪೊಡೆ ಭೀಮನೆ ಪೀರ್ದನೆಯ್ದೆ ಭೀ ॥
ಷ್ಮರ ಬಿಸುನೆತ್ತರಂ ಕುಡಿಪ್ಪೊಡಿನ್ನುಮೊಳಂ ಕುರುರಾಜ ನಿನ್ನ ನೆ ।
ತ್ತರ ಸವಿನೋಳ್ಪಿನಂ ಬಯಸಿ ಬಾತಪೆನೆಂದುದೊಂದು ಪುಲ್ಮರುಳ್ ॥

"ದ್ರೋಣಾಚಾರ್ಯನ ರಕ್ತವನ್ನು ಕುಡಿಯೋಣವೆಂದರೆ ಅವನು ಬ್ರಾಹ್ಮಣ ! ಹೋಗಲಿ ದುಶ್ಯಾಸನನ ರಕ್ತವಾದರೂ ಸಿಗುವುದೆಂದು ಕೊಂಡಿದ್ದರೆ ಭೀಮನೇ ಅದನ್ನೆಲ್ಲ ಬಸಿದ; ಭೀಷ್ಮ ಎಂದೋ ಏನೋ ಸಾಯುವುದು; ಸಾಯುವ ತನಕ ಅವನ ನೆತ್ತರೂ ನಮಗೆ ದೊರೆಯುವಂತಿಲ್ಲ; ಕುರುರಾಜ, ನಿನ್ನ ರಕ್ತದ ಸವಿನೋಡುವುದಕ್ಕಾಗಿ ಬಾತು ಬಾಯಿ ಬಿಡುತ್ತಿದೇನೆ''ಒಂದು ಕ್ಷುದ್ರ ಪಿಶಾಚಿ ಪನ್ನಗಕೇತನನ್ನು ಕಾಡುತ್ತಿ

ರುವ ಸಂದರ್ಭ ಹೃದಯ ವಿದ್ರಾವಕವಾದುದು. ಇಲ್ಲಿಯೂ ಅಷ್ಟೆ ಸಾಹಸಧನ ಮೌನವಾಗಿ ಮುಂದೆ ಸಾಗಿದಾಗ ನೆತ್ತರ್ಗೆಸರಲ್ಲಿ ಕಾಲುಜಾರಿ ಮುಗ್ಗರಿಸಲು ಸಂಜಯ ಪಕ್ಕನೆ ಹಿಡಿದುಕೊಂಡು ಆತಂಕಪಟ್ಟು "ತೊಡೆಗೆ ಪೆಟ್ಟಾಗಲಿಲ್ಲವೆ" ಎಂದಾಗ "ಏನೂ ಆಗಿಲ್ಲ" ಎಂದು ನಿರಾಂತಕವಾಗಿ ಸುಯೋಧನು ನುಡಿಯಲು ನೀಚ ಪಿಶಾಚವೊಂದು ತಲೆಹಾಕಿ "ಭೀಮ ಕೋಪದೆ ನಿನಗೂರು ಭಂಗ ಭಯಮಾಗದೆ ಪೋಕುಮೆ ಕೌರವೇಶ್ವರ!" ಎಂದು ಹರಟುವುದನ್ನು ಕೇಳಿ ಕೆರಳದ ಸಹೃದಯನುಂಟೆ? ಕರ್ಣಕಠೋರ ವಾದ ಪಿಶಾಚವಚನವನ್ನು ಕೇಳಿದಾಕ್ಷಣ ಮೈತ್ರೇಯರು ತನಗಿತ್ತ ಶಾಪದ ನೆನಪಾಗಿ ಮನಃ ಕ್ಷೋಭೆಗೊಂಡರೂ ಮಹಾಸತ್ವವಾದ ದುರ್ಯೋಧನ ಮರುಳಮಾತಿನೊಳ್ ಪುರುಳೇನೆಂದುಕೊಂಡು ಮುಂದಡಿಯಿಟ್ಟಾಗ "ಅರಗಿನ ಮನೆಯನ್ನು ಮರೆತೆಯೋ; ವಿಷವಿಟ್ಟು ಭೀಮನನ್ನು ಕೊಲ್ಲಿಸಬೆತ್ನಿಸಿದ್ದನ್ನು ಜ್ಞಾಪಿಸಿಕೋ; ನಿನ್ನ ಅವಸ್ಥೆಗಳಿಗೆಲ್ಲ ನಿನ್ನ ಹುಚ್ಚಾಟವೇ ಕಾರಣ ವಲ್ಲವೆ; ಭೂತ ಕೋಟಿಯೊಡನೆ ರಣರಂಗದಲ್ಲಿ ಆಡುತ್ತಿರುವ ನಾವು ಮರುಳೋ ಅಥವಾ ನೀನು ಹುಚ್ಚನೋ ನೋಡೋಣ" "ಪ್ರಶ್ನೆಗೆ ಉತ್ತರವಿತ್ತು ಮುಂದಕ್ಕೆ ಹೋಗು; ನುಡಿಯದೆ ಪೋದೀಯ ಶಿವನಾಣೆ;" ಶಿವ ಎಂದಾಕ್ಷಣ ದೈವಭಕ್ತನಾದ ಸುಯೋಧನ ಜಣಕಾಲ ಹಾಗೆನಿಂತ. 'ಹಾಗೆ ಹೋಗುವುದಾದರೆ ಭೀಮನಾಣೆ" ಎಂದಾಗ ಮಾನನಿಧಿ ಮುಳಿದು ಪಿಶಾಚಿಗಳನಟ್ಟಿಸಿಕೊಂಡು ಹೋಗಿ ಗದೆಯೆತ್ತಿದಾಕ್ಷಣ ಸಹಸ್ರಾರು ಪಿಶಾಚಿ 'ಗಳು ಒಮ್ಮೆಗೆ ದೊಣ್ಣೆಗಳನ್ನೆತ್ತಿ ನಿಂದಾಗ ಸಂಜಯ ದುರ್ಯೋಧನನನ್ನು ಗದರಿಸಿ ದಾರಿಗೆತರಬೇಕಾಯಿತು. ದಾರಿಗಡ್ಡವಾದ ಅಡಚಣೆಗಳನ್ನು ಗಮನಕ್ಕೆ ತಾರದೆ ಸಾಹಸಧನ ಮುಂದೆ ಸಾಗಲು "ಆ ದ್ರೌಪದೀ ದ್ರೋಹ ನಾದ ನಿನ್ನನುಜನನ್ನು ಮುಳಿದು ಭೀಮ ಕೊಂದನಲ್ಲೋ!" ಎಂದು ಪಿಶಾಚಿ ಹೀನಾಯವಾಗಿ ನುಡಿದಾಗ ಮಾನನಿಧಿಗೆ ದುಃಖ ಮರಕೊಳಿಸಿತು; ತಮ್ಮನನ್ನುಳಿಸಲಾರದೆ ಹೋದುದಕ್ಕಾಗಿ ಸಂಕಟವುಕ್ಕಿ ಕರಳು ನುಲಚಿ ದಂತಾಯಿತು: ಬದ್ಧದ್ವೇಷಿಯಾದ ಭೀಮನ ಸಾಹಸವನ್ನು ಪಿಶಾಚಿಗಳ ಬಾಯಲ್ಲಿ ಕೇಳಿ ಸಾಹಸಧನ ಎಂತು ಸಹಿಸಿಯಾನು! ಶತ್ರುಗಳನ್ನು ಕೊಂಡಾಡುವ ತಾಣದಲ್ಲಿ ಎಂತು ನಿಂದಾನು! ಹೀಗೆತಾನೆ ತೋಳ

ಹಳ್ಳಕ್ಕೆ ಬಿದ್ದಾಗ ಆಳಿಗೊಂದು ಕಲ್ಲು ಎಂಬ ಮಾತು! ತಡೆಯಾಗ್ಯೂ ನಿಲ್ಲದೆ ಸುಯೋಧನನಿಗೆ ಕಂಬನಿ ಕಾಲುವೆ ಹರಿಯಿತು. ಭಗ್ನಚಿತ್ತನಾಗಿ "ಬಿಲ್ಲೋಜನೆಲ್ಲಿದ್ದಾರೆ; ಭೀಷ್ಮರನ್ನು ನೋಡಬೇಕಾಗಿದೆ" ಗದ್ಗದದನಿಯಲ್ಲಿ ನುಡಿಯೆ ಸಂಜಯ ಪರಿತೋಷಿಸುತ್ತಾ ಕರೆದೊಯ್ಯುವನು:

ಭಯಾನಕವಾದ ರಣರಂಗ ನಡೆದಷ್ಟೂ ಮಾಗಿಯುದಿದೆ. ದಾರಿಗಡ್ಡವಾಗಿ ಆನೆಗಳ ಹಿಂಡೇ ಸತ್ತುರುಳಿ ಪರ್ವತಾಕಾರದ ಗುಡ್ಡೆ ಬಿದ್ದಿದೆ. ಈ ರಾಶಿಯನ್ನು ದಾಟಿ ದುರ್ಯೋಧನ ಮುಂದೆ ಸಾಗಿದರೆ ಅರೆರೇ ರಕ್ತದ ನದಿ ಅಡ್ಡವಾಗಬೇಕೆ! ಅದನ್ನೂ ದಾಟಿದ್ದಾಯಿತು; ಸತ್ತ ಆನೆಗಳ ಸೊಂಡಿಲುಗಳು ಬಿದಿರ ಮೆಳೆಗಳಂತೆ ತೊಡಕೊಡ್ಡಿದಾಗ ಅವುಗಳಿಗೆ ಕಾಲುಸಿಕ್ಕಿಕೊಳ್ಳಲು ಅದನ್ನೂ ಬಿಡಿಸಿಕೊಂಡು ಸಂಜಯನ ಹೆಗಲನ್ನು ಹಿಡಿದುಕೊಂಡು ಸಾಗಿ ಮುಂದಿರುವ ದ್ರೋಣರ ಶವವನ್ನು ಕುರುರಾಜ ನೋಡಿದನು. ಆ ಶವವೂ ಶರಜಾಲದ ಹೊಡೆತದಿಂದ ಜರ್ಜರಿತವಾಗಿ ರಕ್ತಮಾಂಸಗಳ ಮುದ್ದೆಯಾಗಿ ಹೋಗಿದೆ. ನಿಸರ್ಗದುಷ್ಟನಾದ ಧೃಷ್ಟದ್ಯುಮ್ನ ದ್ರೋಣಾಚಾರ್ಯರ ಕೊರಳನ್ನು ನುಲುಚಿರುವುದನ್ನು ಈಗಲೂ ಗುರುತಿಸುವಂತಿದೆ. ಅಸ್ತವ್ಯಸ್ತವಾದ ತನ್ನ ಗುರುವಿನ ಶವವನ್ನು ಕಂಡಾಕ್ಷಣ ಕಂಬನಿ ಮಿಡಿಯುತ್ತ,

ಅರಿಯೆನೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ ।
ನೆರೆಯನಿದಿರ್ಚೆ ನಿಮ್ಮೊಡನೆ ಕಾದಿ ಗೆಲಲ್ಕದು ನಿಮ್ಮುಪೇಕ್ಷೆಯೊಂ ॥
ದರಿಯಿಸಿದೆನ್ನ ಕರ್ಮವಶಮೊಂದರಿಯೆಂ ನಿಮಗೆಂತು ಸಾವು ನಿಮಾ ।
ತೆರದಿನಕಾರಣಂ ನೆರೆಯೆ ಸಂಭವಿಸಿದತ್ತದೆ ಕುಂಭಸಂಭವಾ ॥

"ಆಚಾರ್ಯರೆ, ತಮ್ಮನ್ನು ಇದುರಿಸಿ ಕಾದಾಡಲು ರುದ್ರನೂ ಅಶಕ್ತ; ಹೀಗಿರುವಾಗ ಅರ್ಜುನ ತಮಗೊಂದು ಲೆಕ್ಕವೇ? ತಾವು ಶಸ್ತ್ರಸನ್ಯಾಸ ತೆಗೆದುಕೊಂಡುದು ತಮ್ಮ ಉಪೇಕ್ಷೆಯೋ ಇಲ್ಲವೆ ನನ್ನ ದುರಾದೃಷ್ಟವೋ ದೇವರೆ ಬಲ್ಲ; ತಮ್ಮಂಥ ಮಹನೀಯರಿಗೆ ಬರಬಾರದ ಸಾವು ಎಂತು ಬಂದಿತೋ" ಗುರುಭಕ್ತಿಯಿಂದ ನಮ್ರನಾಗಿ ಸುಯೋಧನ ಪ್ರಲಾಪಿಸಿದ್ದಾನೆ.

ಹಿಂದೊಮ್ಮೆ "ಕಯ್ದುವಂ ಬಿಸುಟೆರ್ ಜೋಳದಪಾಳಿಯುಂ ಬಗೆದನಲ್ಲ ದ್ರೌಣಿಯುಂ ದ್ರೋಣನುಂ" "ಓಜಂಗಡ ಚಿ ಭಾರದ್ವಾಜಂಗಡ", "ದ್ರೋಣನೆಮಗೊಳ್ಳಿಕೆಯ್ದುಂ...... ...ಕಯ್ಸೆ ಸೊರೆಯ ಕಾಡಿಯೇಂ ಮಿಡಿಯೇಂ" ಎಂದು ಆಚಾರ್ಯನನ್ನು ದುರ್ಯೋಧನ ಶೋಕ ಮತ್ತು ಕೋಪೋದ್ರೇಕದಿಂದ ನುಡಿದದ್ದುಂಟು. ಈಗ ಅದೇ ದುರ್ಯೋಧನನೆ ಇನ್ನೊಬ್ಬರನ್ನೇಕೆ ನಿಂದಿಸಬೇಕು ಎಲ್ಲ ನನ್ನ ದುರಾದೃಷ್ಟ ಎಂಬ ಸಿದ್ಧಾಂತಕ್ಕೆ ಬಂದಿದ್ದಾನೆ. ಹಿಂದೆಮಾಡಿದ ಗುರುನಿಂದೆಯನ್ನು ಸಹೃದಯರು ಮರೆಯು ವಂತೆ ಆಚಾರ್ಯನ ಕಳೇಬರದಿದಿರು ಚರಮಗೀತೆಯನ್ನು ಪಾಡಿ ಪನ್ನಗ ಕೇತನ ಪಾವನನಾಗಿದಾನೆ. "ಶತ್ರುಸೈನ್ಯದ ಒಡಲತುಂಬ ದ್ರೋಣನಿಟ್ಟ ಬಾಣಗಳೇ! ಬಿಲ್ವಿದ್ಯೆಯಲ್ಲಿ ತನಗಿದ್ದ ಅಪೂರ್ವ ಚಾತುರ್ಯವನ್ನು ತನ್ನ ಶಿಷ್ಯಮಂಡಳಿಗೆ ಧಾರೆಯೆರೆದು ಹೋಗಿದ್ದಾನೆ! ಈತನ ಕೀರ್ತಿಯ ಕಾಂತಿ ದಿಕ್ಕುಗಳನ್ನೆಲ್ಲ ಬೆಳಗಿದೆ; ಆಚಾರ್ಯರು ಅಂತ್ಯಕಾಲದಲ್ಲಿ ನಾರಾಯಣನನ್ನು ನೆನೆಯುತ್ತಾ ವೈಕುಂಠವಾಸಿಯಾದರು; ಪರಾಕ್ರಮದಿಂದ ಹೋರಾಡುತ್ತಾ ಚಾಪಾಗಮಾಚಾರ್ಯರಲ್ಲಿ ಅದ್ವಿತೀಯನೆನಿಸಿಕೊಂಡು ತನ್ನ ಅನುಪಮ ಜೀವಿತವನ್ನು ಮುಗಿಸಿದಾರೆ" ರಾಜಾಧಿರಾಜ ಅಂತರಾಳದಿಂದ ಚಿಮ್ಮಿ ಬಂದ ಗುರುಭಕ್ತಿಯಿಂದ ಇಂತು ಕೊಂಡಾಡಿದಾನೆ. ಬತ್ತಳಿಕೆಯಲ್ಲಿ ಬಾಣವೊಂದನ್ನಾದರೂ ಮಿಗಿಸಿಕೊಳ್ಳದೆ ಹೋರಾಡಿ ಸತ್ತರೆಂದು ಧನ ತನ್ನ ಗುರುವಿಗೆ ಕಂಬನಿಯ ಕಾಣಿಕೆಯನ್ನಿತ್ತಿದಾನೆ. ಆಚಾರ್ಯರ ಶವಕ್ಕೆ ಮೂರುಬಾರಿ ಪ್ರದಕ್ಷಿಸಿ ನಮ್ರನಾಗಿ ಕೈಮುಗಿದು ಮುಂದೆ ಸಾಗಿ ದನು.

ಬರುತ್ತಿರಲು ದಾರಿಗಡ್ಡವಾಗಿ ಆಜೀವೀರನಾದ ಅಭಿಮನ್ಯು ಪವುಳಿ ರುವನು; ಅವುಡುಗಚ್ಚಿ ಭಯಂಕರಾಕಾರ ತಳೆದಿದಾನೆ; ಶತ್ರುಗಳ ಬಾಣದ ಪೆಟ್ಟಿನಿಂದ ಶರೀರವೆಲ್ಲ ಜರ್ಜರಿತವಾಗಿದೆ; ಕೆನ್ನೀರಲ್ಲಿ ಅಭಿಮನ್ಯುವಿನ ಜರ್ಜರಿತ ಕಳೇಬರ ಮುಳುಗಿ ಕೆಸರಾಗಿದೆ; ಈ ಶವವನ್ನು ನೋಡಿದಾಕ್ಷಣ ಸಾಹಸಧನ "ಆಚಾರ್ಯರೊಡ್ಡಿದ್ದ ವ್ಯೂಹಕ್ಕೆ ನುಗ್ಗಲು ಯಾರಿಂದ ತಾನೆ ಸಾಧ್ಯ? ಅಂತಹ ವ್ಯೂಹವನ್ನು ಭೇದಿಸಿಕೊಂಡು ನುಗ್ಗಿ ಶತ್ರುರಾಜ

ರನ್ನು ಕೊಂದು ಹೋದ ನಿನಗೆ ಸಮನಾದ ಗಂಡಾರು! ಅನೇಕಜನ ಶೂರರು ನಿನ್ನನ್ನಿದಿರಿಸಿ ಕಾದಾಡಿದರು; ನೀನಾದರೋ ಒಂಟಿಯಾಗಿದ್ದರೂ ಅವರನ್ನೆಲ್ಲ ಕೊಂದೆ; ನಿನ್ನನ್ನು ಪೆತ್ತವಳು ನಿಜವಾಗಿಯೂ ವೀರವನಿತೆ!'

ಅಸಮಬಲ ಭವದ್ವಿಕ್ರಮ ।
ಮಸಂಭವಂ ಪೆರರ್ಗೆ ನಿನ್ನನಾನಿನಿತಂ ಪ್ರಾ ॥
ರ್ಥಿಸುವೆನಭಿಮನ್ಯು ನಿಜಸಾ ।
ಹಸೈಕದೇಶಾನುಕರಣಮೆನಗಕ್ಕೆಗಡಾ ॥

"ಅಭಿಮನ್ಯು ನೀನು ಅಸಮಬಲಶಾಲಿ: ನಿನ್ನಂತೆ ಸಾಹಸವನ್ನು ತೋರಿಸುವಾತನುಂಟೆ! ನಿನ್ನ ಸಾಹಸದ ಒಂದಂಶವನ್ನಾದರೂ ನಾನು ತೋರುವಂತಾಗಿ ನಿನಗೊದಗಿದ ವೀರೋಚಿತಮರಣ ನನಗೂ ಲಭಿಸುವಂತಾಗಲಿ" ಸಾಹಸಧನ ಇಂತು ನೆನೆದು ಶತ್ರುಪಕ್ಷದ ಅಭಿಮನ್ಯುವಿಗೆ ಮನಸಾರೆ ಕೈಮುಗಿಯುತ್ತಾನೆ, ಇಲ್ಲಿ ದುರ್ಯೋಧನನ ಪಾತ್ರ ಮುಗಿಲು ಮುಟ್ಟಿದೆ. ಹಿಂದೆ ಆತನಿಂದಾಗಿರಬಹುದಾದ ಅನುಚಿತ ಅನ್ಯಾಯಗಳನ್ನೆಲ್ಲ ಲೋಕ ಮರೆವಂತಾಗಿದೆ. ಈ ಸಂದರ್ಭವನ್ನು ದುರ್ಯೋಧನನ ಬಾಳ್ವಿಕೆಗೆ ಸಂಬಂಧಿಸಿ ರನ್ನಮಹಾಕವಿ ಈತನನ್ನು ಮಹಾನುಭಾವನನ್ನಾಗಿಮಾಡಿದಾನೆ. ಶತ್ರುವಿನ ಶೌರ್ಯಪರಾಕ್ರಮವನ್ನು ಕೊಂಡಾಡಿ ಸಾಹಸಧನ ಸಹೃದಯತೆಯ ಸಿರಿವಂತನಾದನು.

ಅಭಿಮನ್ಯುವಿನಿಂದ ಬೀಳ್ಕೊಂಡು ಪನ್ನಗಕೇತನ ಮುಂದೆ ಸಾಗಿ ಬರಲು ತನ್ನ ಮಗನಾದ ಲಕ್ಷಣಕುಮಾರನ ಕಳೇಬರವನ್ನು ಕಾಣಬೇಕಾಯಿತು. ಒಮ್ಮೆಗೆ ಸಂಕಟ ಉಕ್ಕಿ ದುರ್ಯೋಧನ ನೆಲಕ್ಕೆ ಕುಸಿಯುತ್ತಾನೆ,

ಗಳಿತಶರವಾಯ್ತು ಹಸ್ತಂ ।
ಗಳಿತರಣೋತ್ಸಾಹಮಾಯ್ತು ಹೃದಯಂ ನಯನಂ ॥
ಗಳಿತಾಶ್ರುಮಾಯ್ತು ಕೌರವ ।
ಕುಳತಿಳಕಂಗಾ ಕುಮಾರನಂ ಕಾಣಬೊಡಂ ॥

ದುರ್ಯೋಧನನ ಕೈಯಿಂದ ಬಾಣ ಜಾರಿ ನೆಲಕ್ಕುರುಳಿತು ಹೃದಯ ಕರಗಿನೀರಾಗಿ ರಣೋತ್ಸಾಹ ನಂದಿಹೋಯಿತು: ಕಣ್ಣೀರು ಕಾಲುವೆಯಾಗಿ ಹರಿಯಿತು: ತನ್ನ ಮಗುವನ್ನು ಕಂಡಾಕ್ಷಣ ಕೌರವಕುಲ ತಿಲಕನ ಪರಿ ಇಂತಾದುದು; ಆಗ "ಗಾಂಧಾರಿ ನಂದನಂ ಭಾನುಮತಿ ನಂದನನ ಮೊಗವನ್ನು ನೋಡಿ" ಎಂದಿದಾನೆ ಮಹಾಕವಿ ರನ್ನ.

ಈ ಸಂದರ್ಭದಲ್ಲಿ ಗಾಂಧಾರಿಯನ್ನೂ ಭಾನುಮತಿಯನ್ನೂ ದುರ್ಯೋಧನನ ಹಾಗೂ ಸಹೃದಯರ ನೆನಪಿಗೆ ತಂದಿರುವುದು ಕವಿಯ ಕಲಾಕುಶಲತೆಯನ್ನು ಮರೆಯದಿರಲಾರದು. ಗಾಂಧಾರಿಯ ನೋವು ದುರ್ಯೋಧನನಿಗೆ ಅರ್ಥವಾಗಿರಲಿಲ್ಲ. ಈಗ ಮಗ ಸತ್ತುದಕ್ಕಾಗಿ ಭಾನುಮತಿ ಎಷ್ಟು ಪರಿತಪಿಸಬಹುದೆಂಬುದನ್ನು ಅರ್ಥಮಾಡಿಕೊಂಡಿದ್ದಾನೆ; ತನ್ನ ತಾಯಿಯ ಕರುಳಕೂಗನ್ನು ದುರ್ಯೋಧನ ಈಗ ಗ್ರಹಿಸಬಹುದು ಜನಕಂಗೆ ಜಲಾಂಜಲಿಯಂ ತನೂಭವಂ ಕುಡುವುದುಚಿತಂ ಅದುಗೇಡುಗ ನಿನಗಾಂ ಕುಡುವಂತಾದುದೇ ಎಂದು ಪುತ್ರವಾತ್ಸಲ್ಯದಿಂದ ಸುಯೋಧನ ಅರಿಚಿರುವನು. ಅಲ್ಲಿ ನಿಂತಷ್ಟೂ ಸಂಕಟ ಹೆಚ್ಚಿತೆ ವಿನಃ ತಗ್ಗುವಂತಿಲ್ಲ ಎಂದುಕೊಂಡು ಮುಂದೆ ನಡೆದ. ನಡೆದನೇನಂತೆ! ಹೆಜ್ಜೆಹೆಜ್ಜೆಗೂ ತನಗಾಗಿ ಹೋರಾಡಿಸುತ್ತ ಮಹಾವೀರರ ಕಳೇಬರಗಳು ಕೌರವತಿಲಕನ ಕಾಲಿಗೆ ತಾಕಿ ಕೊನೆಯ ಪ್ರಭುಭಕ್ತಿಯನ್ನು ತೋರುತ್ತವೆ. ಸಿಂಧುರಾಜನನ್ನು ಕಂಡುದಾಯಿತು; ಶಲ್ಯನ ಶವನನ್ನೂ ನೋಡಿದ್ದಾಯಿತು; ತನ್ನಪ್ಪೆಯ ಸಹೋದರನಾದ ಶಕುನಿಯ ದೇಹವನ್ನೂ ನೋಡಬೇಕಾಯಿತು; ಈಗ ದುರ್ಯೋಧನನಿಗೆ ಯಾರ ಮೇಲೂ ದ್ವೇಷವಿಲ್ಲ. ಎಲ್ಲರಲ್ಲೂ ಇದ್ದ ಒಳ್ಳೆ ಗುಣಗಳನ್ನು ಮಾತ್ರ ನೆನೆದು ಕೊರಗಿ ಕೊಂಡಾಡುತ್ತಾನೆ. ಸತ್ತ ತನ್ನ ಪಕ್ಷದ ವೀರಾಧಿವೀರರನ್ನು "ಮಣಿಗಳ್, ಕೈಲಾಸ ಶೈಲಕಲ್ಪಕ ಸುಭಟಾಗ್ರಣಿಗಳ್" "ಎನ್ನಯ ಕಾರಣದಿಂದೀ ನೃಪಸುತರ್ಕಳಳಲ್ಕಾಳಿದರೇ!" ಎಂದುಕೊಂಡು ಅವರಿಗಾಗಿ ಮಮ್ಮಲ ಕೊರಗುತ್ತಾನೆ. ರನ್ನನ ದುರ್ಯೋಧನ ಗುಣಗ್ರಾಹಿಯಾಗಿದ್ದಾನೆ. ಸಾಹಸಿಗಳನ್ನು ಕಂಡು ಮೆಚ್ಚುವ ಮಹಾನುಭಾವನಾಗಿದ್ದಾನೆ. ಕರಬುತನಕ್ಕೆ ರನ್ನಮಹಾಕವಿಯ ದುರ್ಯೋಧನನ ಬಳಿ ಎಂದೂ ಎಡೆಯಿಲ್ಲ.

ತನ್ನಿದಿರಾದ ಶೂರಾದಿಶೂರರ ಕಳೇಬರಗಳನ್ನು ಕಾಡು ಕೊಂಡಾಡಿ ಸಾಧ್ಯವಾದೆಡೆ ಮುಂಡಾಡಿ ಮಹಾನುಭಾವ ಮುಂದೆ ಸಾಗುವಾಗ ಭೀಮಸೇನನ ಗಧಾಘಾತಕ್ಕೆ ಸಿಕ್ಕಿ ರಕ್ತಪ್ರವಾಹದಲ್ಲಿ ತೇಲುತ್ತಿದ್ದ ದುಶ್ಶಾಸನನ ಕಳೇಬರದೆಡೆ ಬಂದಾಗ ಸಂಜಯ ಸುಮ್ಮನಿರದೆ "ಈತನನ್ನು ಭೀಮ ಧೂಳಲ್ಲಿ ಹೊರಳಾಡಿಸಿ ಈತನ ದೇಹದ ಮಾಂಸವನ್ನೆಲ್ಲ ಕಿತ್ತು ತಿಂದು ಅಷ್ಟಕ್ಕೆ ಬಿಡದೆ ರಕ್ತವನ್ನೆಲ್ಲ ಬಸಿದನು; ಇಷ್ಟಾದರೂ ಆ ಹಿಡಿಂಬರಿಪು ತಣಿಯಲಿಲ್ಲ" ಎಂದು ದುರ್ಯೋಧನನ ನೆನಪಿಗೆ ಹಿಂದಾದುದನ್ನು ತರುತ್ತಾನೆ. ಇದನ್ನು ಕೇಳಿಯೂ ಕೇಳದಂತೆ ದುರ್ಯೋಧನ ಎರಡು ಹೆಜ್ಜೆ ಇಟ್ಟು ತಮ್ಮನ ಕಳೇಬರವನ್ನು ಕಂಡು ಶೋಕೋದ್ರೇಕವಾದರೂ ಮರುಕ್ಷಣದಲ್ಲೇ ಕೋಪೋದ್ರೇಕವಾಗಿ "ಅಯ್ಯೊ ತಮ್ಮ, ಭೀಮ ನಿನ್ನ ಸೊಂಟ ಮುರಿದನೆ! ಪಕ್ಕೆಲುಬುಗಳೆಲ್ಲ ಹುಡಿಯಾಗುವ ತನಕ ಒತ್ತಿದನೇ! ದೇಹವೆಲ್ಲ ಒಂದೇ ಮಾಂಸದ ಮುದ್ದೆಯನ್ನಾಗಿ ಮಾಡಿದನಲ್ಲ; ಇಷ್ಟಾದರೂ ಬಿಡದೆ ನಿನ್ನ ರಕ್ತವನ್ನೂ ಬಸಿದ ಆ ಅಸುರನ ನೆತ್ತರನ್ನು ಬಸಿವತನಕ ನನ್ನಳಲು ಹಿಂಗೀತೆ?" ಎಂದು ಅಬ್ಬರಿಸಿ ತನ್ನಣುಗದಮ್ಮನನ್ನೀಕ್ಷಿಸಿದನಂತೆ! "ತಮ್ಮ, ನಿನ್ನ ಜೀವ ಪರಲೋಕದಲ್ಲಿದೆ; ನಿನ್ನ ಮಾಂಸ ಪಿಶಾಚಗಳ ಬಾಯಲ್ಲಿದೆ; ನಿನ್ನ ರಕ್ತವಾದರೋ ವೃಕೋದರನ ಹೊಟ್ಟೆಯಲ್ಲಿದೆ; ನಿನ್ನ ತಲೆ ರಾಕ್ಷಸಿಯ ಕೈಸೇರಿದೆ; ನಿನ್ನ ದೇಹ ಮಾತ್ರ ಇನ್ನೂ ಕುರುಭೂಮಿಯಲ್ಲಿದೆ; ಗಾಂಧಾರೀಜ ದುರ್ಯೋಧನಾನುಜ ದುಶ್ಶಾಸನ, ಭೀಮನ ಭೀಕರವಾದ ಗದೆಯಿಂದ ನಿನ್ನ ಬಾಳೆಲ್ಲ ಐದು ಭಾಗವಾಗಿ ಹರಿದು ಹಂಚಿಹೋಯಿತೆ! ತಮ್ಮನಿಗಾಗಿ ಆದರ್ಶನಾದ ಅಣ್ಣ ಮರುಗಿದನಂತೆ.

"ತಾಯಿ ಹಾಲನ್ನು ಮೊದಲುಂಡವನಾನು: ಅನಂತರ ನಿನ್ನ ಸರದಿ ಬಂದಿತು; ಎಲ್ಲ ಭೋಗಗಳನ್ನು ನಾನೇ ಮೊದಲು ಭೋಗಿಸಿದೆ; ಅದೆಲ್ಲದರಲ್ಲೂ ನೀನು ಎರಡನೆಯವ: ಅಂತು ಹುಟ್ಟಿದಾರಭ್ಯ ನಾನು ಎಲ್ಲಕ್ಕೂ ಮುಂದು ನೀನಾದರೋ ಹಿಂದಾಗಿ ವಿನಯವನ್ನು ತೋರಿಕೊಂಡೇ ಬಂದೆ. ಸಾವಿನಲ್ಲಿ ಮಾತ್ರ ನನಗಿಂತ ಮುನ್ನುಗ್ಗಿದೆ: ರಣ

ರಂಗಕ್ಕೆ ಬರಲು ನಾನು ಚಣತಡವಾಗಿದೆ'' ಎಂದು ಸಾಹಸಧನ ಪ್ರಲಾಪಿಸಿ,

ಅನುಜನ ನೆತ್ತರ ನೀಂಪೆದ ।
ನನೆತ್ತರಂ ಜೀವಸಹಿತ ಮಿಾಂಟದೆ ದುರ್ಯೋ ॥
ಧನನೆಂಬ ಪೆಸರ್ಗೆ ಮುಯ್ಯಾಂ ।
ಪೆನ ದುಶ್ಶಾಸನನ ಬನ್ನಮಂ ನೀಗುವೆನೇ ॥

"ನನ್ನ ತಮ್ಮನ ರಕ್ತವನ್ನು ಕುಡಿದ ಭೀಮನ ನೆತ್ತರನ್ನು ಜೀವ ಸಹಿತ ಕುಡಿಯದಿದ್ದರೆ ದುರ್ಯೋಧನನೆಂಬ ಹೆಸರು ನನಗೇತಕ್ಕೆ! ಎಂದಿಗೆ ದುಶ್ಶಾಸನನ ಭಂಗವನ್ನು ಕಳೆದು ಸೇಡನ್ನು ತೀರಿಸಿಕೊಂಡೇನೋ'' ಪ್ರಲಾಪಿಸುತ್ತಿದ್ದ ಅಹಿಕೇತನನ ಕೋಪ ಹೆಡೆಯೆತ್ತಿ ಪ್ರತೀಕಾರವೆಸಗಲು ಹಾತೊರೆದಿದೆ. ಈ ಸಂದರ್ಭವನ್ನು ಮಹಾಕವಿ ರುದ್ರಮಣೀಯವಾಗಿ ಚಿತ್ರಿಸಿದಾನೆ. ಎಂಥ ಸಂಕಟಬಂದರೂ ಸಾಹಸಧನನಲ್ಲಿ ಛಲ ಹೆಡೆ ಯೆತ್ತಿ ಉತ್ಸಾಹವನ್ನು ಉದ್ರೇಕಿಸಿ ಪರಾಕ್ರಮ ಪ್ರಜ್ವಲಿಸುವಂತೆ ಪಾತ್ರ ಸೃಷ್ಟಿಯಲ್ಲಿ ಕವಿ ಎಲ್ಲೆಲ್ಲೂ ಕುಶಲತೆಯನ್ನು ತೋರಿದಾನೆ.

ಗಳಿತರಣೋತ್ಸಾಹನಾಗಿರ್ದ ದುರ್ಯೋಧನನಿಗೆ ದುಶ್ಶಾಸನನ ಶವ ಮತ್ತೊಮ್ಮೆ ರಣೋತ್ಸಾಹ ಬರುವಂತೆ ಮಾಡಿತು. ದೃಢಮನಸ್ಕನಾಗಿ ಸುಯೋಧನ ಕರಿತುರಗನರ ಕಳೇಬರಗಳನ್ನು ಮೆಟ್ಟಿಕೊಂಡು ಮುಂದೆ ಸಾಗಿದನು. ವಿಧಿಗೆ ಇನ್ನೂ ಸಮಾಧಾನವಿಲ್ಲ. ಕುರುಕ್ಷೇತ್ರದಲ್ಲಿ ಹರಿದ ರಕ್ತಕ್ಕೆ ಸರಿಮಿಗಿಲಾಗಿ ದುರ್ಯೋಧನ ಕಂಬನಿ ಮಿಡಿದಾಗ್ಯೂ ಭೂದೇವಿ ತಣಿದಿಲ್ಲ. ನರಕರ ವಿಮುಕ್ತಶರ ಜರ್ಜರಿತನಾದ ಅಂಗರಾಜನ ಶವವೂ ಕೌರವೇಂದ್ರನ ಕಣ್ಣಿಗೆ ಬೀಳಬೇಕೆ! ಶೋಚನೀಯವಾದ ಕರ್ಣನನ್ನು ತಾಯ್ಗರುಳಾಗಿ ಸುಯೋಧನ ಸಲಹಿದ್ದ. ಪೆತ್ತಮಾತೆ ತನ್ನ ಕಂದ ನಾದ ಕರ್ಣನನ್ನು ಕೀರ್ತಿಗೆ ಕಳಂಕಪ್ರಾಯನೆಂದು ನಿರ್ದಯಳಾಗಿ ನದಿ ಯಲ್ಲೀಡಾಡಿದ ಮೇಲೆ ಹೇಗೋ ರಾಧೆಯ ಕೈಲಿ ಬೆಳೆದು ಬೇಡನೆನಿಸಿ ಕೊಂಡು ಯಾರಿಗೂ ಬೇಡದವನಾಗಿದ್ದ ಕರ್ಣನನ್ನು ದುರ್ಯೋಧನ ಮೆಚ್ಚಿ ಅಂಗರಾಜನನ್ನಾಗಿಮಾಡಿ ಕೊಂಡಾಡಿದ್ದ. ಕರ್ಣನ ಕಳೇಬ

ಕಂಡಾಗುಕ್ಕಿದ ದುಃಖವನಂತರಾಗಿಕ್ಕಿ ರನ್ನನು ಮಹಾಕವಿ ನಮ್ಮನ್ನು ಮುಳುಗಿಸುತ್ತಾನೆ.

ನೆಗಪಿ ವರರೂಥವನುಂ ವಸುಧೆ ನುಂಗಿದುದಂ ಸಮಸಾದಪಾಪನಂ |
ಬಗೆಗೊಳೆ ತನ್ನಮುಂ ತೆಗೆದ ಮುಷ್ಟಿಯೆ ದಕ್ಷಿಣಕರ್ಣ ಮೂಲದೊಳ್ ||
ಸೊಗೆಯಿಸೆ ಪಾಳಿಯುಂ ನೆರಪದಾಳ್ದನ ಕಜ್ಜಮನೊಕ್ಕು ಸತ್ತರಂ |
ನ ಏನಪೊಲಿದ-ನಂಗಪತಿ ನೆಮ್ಮಿನಿಜೋನ್ನತ ಕೇತುದಂಡಮುಂ ||

"ಭೂಮಿ ನುಂಗಿದ ರಥವನ್ನು ನೋಡಿಕ್ತಿ ತನ್ನ ಪಾದಗಳನ್ನು ಸಮನಾಗಿ ಜೋಡಿಸಿಕೊಂಡು, ಬಾಣಹೂಡಿ ಹೆದೆಯನ್ನು ಕಿವಿತನಕ ಸೆಳೆದಿದ್ದ ಕೈ ಇನ್ನೂ ಕದಲದೆ ಅಲ್ಲೆ ಕಂಗೊಳಿಸುತ್ತಿರಲು; ತಿಂದ ಮನೆಗೆರಡು ಬಗೆದು ಸತ್ತವರನ್ನು ಕಂಡು ಪರಿಹಾಸ್ಯಮಾಡಿಕೊಂಡು ನಗುವಂತೆ ಅಂಗರಾಜ ಧ್ವಜದಂಡಕೊರಗಿಕೊಂಡು ಕಂಗೊಳಿಸಿದನಂತೆ" ರನ್ನಮಹಾಕವಿ ಚಿತ್ರಗಾರನಾಗಿ ಕರ್ಣನಕಳೇಬರವನ್ನು ಮನಮುಟ್ಟುವಂತೆ ಚಿತ್ರಿಸಿದಾನೆ. ಮಹಾಕವಿಯ ಮಾತುಗಳ ಭಾವವನ್ನು ಗ್ರಹಿಸಿ ಚಿತ್ರಗಾರ ನಿರಾಯಾಸವಾಗಿ ಚಿತ್ರವನ್ನು ಬಣ್ಣಗಳಿಂದ ಬಿಡಿಸಬಹುದು. ರನ್ನನ ವಿವರಣೆ ಎಂದೂ ಅಸ್ಪಷ್ಟವಾಗಲಾರದೆಂಬುದಕ್ಕೆ ಕಣ್ಣಿಗೆ ಕಟ್ಟುವ ಈ ಚಿತ್ರವೇ ಸಾಕು!

"ದಿನಕರ ತನೂಜನನಂ ರಾಜ ರಾಜಂ ನೋಡಿ ಭಾಷ್ಪವಾರಿಧಾರಾಪೂರಿತ ಲೋಚನನುಂ ಮನ್ಯೂದ್ಗತ ಕಂಠನುಂ ಅಸಹ್ಯ ಶೋಕಾನಲದಹ್ಯಮಾನಾಂತಃ ಕರಣನುಮಾಗಿ"

ಅನುಂ ದುಃಶ್ಯಾಸನನುಂ |
ನೀನುಂ ಮೂವರೆದಲಾತನುಂ ಕಳಿದ ಬಳಿ |
ಕ್ಕಾನುಂ ನೀನೆದಲೀಗಳ್ |
ನೀನು ಮಗಳ್ದೆತ್ತವೋದೆಯುಂ ಗಾಧಿಪತೀ ||

"ಕರ್ಣನನ್ನು ಕೌರವೇಂದ್ರ ನೋಡಿದಾಕ್ಷಣ ಕಣ್ಣೀರು ಕಾಲುವೆಗಟ್ಟಿ ಹರಿಯಿತು; ಗದ್ಗದದನಿಯಿಂದ ಅಸಹ್ಯವಾದ ಶೋಕಜ್ವಾಲೆಯಿಂದ ಅಂತಃ

ಕರಣ ಕರಗಿ ನೀರಾಗಿ "ಲೋಕಪಡೆದ ಮಹಾಪುರುಷರೆಂದರೆ ಕೇವಲ ಮೂರುಮಂದಿ ಮಾತ್ರ ನಾನೊಬ್ಬ, ದುಶ್ಶಾಸನ ಮತ್ತೊಬ್ಬ ? ಕರ್ಣ ನೀನು ಮಗದೊಬ್ಬ; ದುಶ್ಶಾಸನ ಸತ್ತಮೇಲೆ ಕೇವಲ ನಾನೂ ನೀನು ಉಳಕೊಂಡೆವು; ಈಗ ನಿನ್ನ ಮಗ ವೃಷಸೇನ ಹಾಗೂ ನನ್ನ ಕಂದ ಲಕ್ಷ್ಮಣ ಇಬ್ಬರೂ ಸತ್ತುಹೋದರು; ನನ್ನ ಸಂಕಟವನ್ನು ನಿನ್ನ ಬಳಿ ತೋಡಿಕೊಂಡು ಸಮಾಧಾನ ಮಾಡೋಣವೆಂದು ಕೊಂಡು ಬಂದೆ ನಪ್ಪ"

ಅರಿಯೆನಿದಂ ನಿನ್ನಿಂದಿನ
ತೆರನಂ ನೀನೆನಗೆ ಯೇಕೆ ಮುಳಿದಿರ್ದೆಯೊ ಮೇಣ್ ||
ಮರವಾತುಗುಡದೆ ರವಿಸುತ
ಮರವಿಂದಿರ್ದಪೆಯೊ ಮೇಣ್ ಬಳಲ್ದಿರ್ದಪೆಯೊ ||

ಹಿಂದೆಂದೂ ಈ ರೀತಿ ನೀನು ವರ್ತಿಸುವುದನ್ನು ಕಂಡರಿಯೆ; ನನ್ನ ಮೇಲೇಕೆ ಸಿಟ್ಟಾಗಿರುವೆ; ನಾನಿಷ್ಟು ಅಂಗಲಾಚಿದರೂ ಒಂದು ಮಾತನ್ನೂ ಆಡದೆ ಸುಮ್ಮನಿರುವೆಯಲ್ಲಾ; ವ್ಯಾಕುಲಚಿತ್ತನಾಗಿರುವೆಯೋ ಅಥವ ಆಯಾಸ ವಾಗಿದೆಯೊ"

ನಿನ್ನ ಕೆಳೆಯಿಂ ಸುಯೋಧನ
ನಂ ನೋಡದೆ ನುಡಿಯದಪ್ಪಿಕೊಳ್ಳದೆ ಬೆಸನೇ ||
ನೆನ್ನದೆ ಜೀಯೆನ್ನದೆ ದೇ
ವೆನ್ನದೆ ಯೇಕಿಸಿರದಿರ್ದೆ ಯಂಗಾಧಿಪತೀ ||

"ಅಯ್ಯೋ ನಿನ್ನ ಕೆಳೆಯನಾದ ಸುಯೋಧನನಲ್ಲವೆ ನಾನು; ಒಮ್ಮೆ ಯಾದರೂ ನನ್ನನ್ನು ನೋಡಬಾರದೆ; ಒಂದುಮಾತನ್ನಾದರೂ ಆಡ ಬಾರದೆ; ನನ್ನನ್ನಪ್ಪಿ ಬೆಸನೇನೆಂದು ಕೇಳಿ ಜೀಯ, ದೇವ ಎಂದು ಕೊಂಡಾಡದೆ ಮೌನವಾಗಿರುವುದು ನಿನಗೆತರವೆ ? "

ನೀನುಳ್ಳೊಡಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆ ಯುಂಟಯ್ ||

ನೀನುಳ್ಳೊಡುಂಟು ಪೀಳಿಗೆ
ನೀನಿಲ್ಲದಿನೆಲ್ಲನೊಳವೆ ಅಂಗಾಧಿಪತೀ ||

"ನೀನಿದ್ದರೆ ಮಾತ್ರ ನನಗೆ ರಾಜ್ಯ; ನೀನು ಬದುಕಿದ್ದರೆ ಲೋಕದ ಪಟ್ಟ ನನಗಲ್ಲದೆ ಮತ್ತಾರಿಗೆ; ನೀನಿದ್ದರೆ ಮಾತ್ರ ಬೆಳ್ಗೊಡೆ ಶೋಭಾಯಮಾನವಾಗಿರುತ್ತದೆ: ನನ್ನ ಪೀಳಿಗೆಗೂ ನಿನ್ನ ಅಸ್ತಿತ್ವವೇ ಅಡಿಗಲ್ಲು: ನೀನೊಬ್ಬ ಹೋದೆಯಾದರೆ ನನ್ನ ಸರ್ವಸಂಪದವೂ ಹೋದಂತೆ."

ನಯನದೊಳಮರ್ದೆಯೊಳಂ ನಿ
ನ್ನಯ ರೂಪಿರ್ದಪುದು ನಿನ್ನ ಮಾತಿರ್ದಪುದೆ ।
ನ್ನಯ ಕಿವಿಯೊಳ್ನಿನಸಂಗನ
ವಿಯೋಗಮೆಂತಾದುದುಯೆನಗಂಗಾಧಿಪತೀ ||

"ಅಂಗಾಧಿಪತಿ, ನನ್ನ ಕಣ್ಣಲ್ಲೂ ಎದೆಯಲ್ಲೂ ನಿನ್ನ ರೂಪ ತುಂಬಿಕೊಂಡಿದೆ; ನನ್ನ ಕಿವಿಯಲ್ಲಿ ಇಂದಿಗೂ ನೀನಾಡಿದ ನುಡಿ ತುಂಬಿದೆ; ಹೀಗಿರುವಾಗ ನನಗೂ ನಿನಗೂ ವಿಯೋಗ ಎಂತಾದುದು? "

ನಿನ್ನಂ ಕೊಂದ ಕಿರೀಟಿಯುಂ
ಮನ್ನಣುಗನನಿಕ್ಕಿಕೊಂದ ಭೀಮನುಮೊಳನಾ ।
ನಿನ್ನವೊಳೆಂ ಗಡ ಸಾಲದೆ
ನಿನ್ನಯ ಕೂರ್ಮೆಗಮದೆನ್ನ ಸೌಧರ್ಮಿಕೆಗಂ ||

" ನಿನ್ನನ್ನು ಕೊಂದ ಅರ್ಜುನ ಇನ್ನೂ ಬದುಕಿದಾನೆ; ದುಶ್ಶಾಸನನನ್ನು ಸಾಯಿಸಿದ ಭೀಮನೂ ಇದ್ದಾನೆ; ನಿಮ್ಮಿಬ್ಬರ ಸಾವನ್ನು ಕಂಡ ನಾನೂ ಹಾಯಾಗಿದೇನೆ; ಇಷ್ಟೇ ಸಾಲದೆ ನಿನ್ನ ಪ್ರೇಮಕ್ಕೂ ನನ್ನ ನಡೆತೆಗೂ ಇರುವ ಅಂತರವನ್ನು ಅಳೆಯಲು ! "

ಸೂನುಗಳಳಿವಂ ಪ್ರಿಯ ಮಿ
ತ್ರಾನುಜರಳಿವಂ ವಿಧಾತ್ರ ನೀಂ ಕಾಣಿಸಿಯಿ ।

ನೇನ್ನಂ ಕಾಣಿಸಲಿರ್ದಪೆ
ನೀನ್ನೆನಂ ಪಾಪಕರ್ಮನಂ ನಿರ್ಗುಣಿಯಂ ||

"ಮಕ್ಕಳ ಸಾವನ್ನು ಕಂಡುದಾಯಿತು; ಪ್ರಿಯಮಿತ್ರರ ಅಳಿವನ್ನೂ ನೋಡಬೇಕಾಯಿತು; ತಮ್ಮಂದಿರ ಅಂತ್ಯವನ್ನೂ ಅವಲೋಕಿಸಿದ್ದಾಯಿತು; ವಿಧಾತ್ರ, ಇನ್ನೂ ಏನೇನನ್ನು ನೋಡಿಸಬೇಕೆಂದಿರುವೆ? ನಾನೆಂಥ ಪಾಪಿ; ನಾನೆಂಥ ನಿರ್ಗುಣಿ" ಇದಿಷ್ಟೂ ದುರ್ಯೋಧನ ತನ್ನ ಪ್ರಿಯ ಮಿತ್ರನ ಕಳೇಬರದಿದಿರು ಸಂಕಟದಿಂದ ಪ್ರಲಾಪಿಸಿದಾನೆ. ಒಂದೊಂದು ಮಾತೂ ಸಹೃದಯರನ್ನು ಅಳಲಿನ ಅಂತರಾಳಕ್ಕೆ ಎಳೆದೊಯ್ಯುವುದು. ದುರ್ಯೋಧನನ ಶೋಕಸಾಗರ ಅಪಾರವಾದುದು. ಈ ಶೋಕದಲ್ಲಿ ಅವರಿಬ್ಬರ ಸ್ನೇಹದನಾಲೋಕವೂ ಅಡಗಿದೆ. ದುರ್ಯೋಧನನ ಪ್ರಲಾಪ ಶೋಕಸಾಗರವೂ ಅಹುದು, ಅಂತೆಯೇ ಸ್ನೇಹದ ಸುಮೇರುವೂ ಅಹುದು. ಈ ಭಾಗದಲ್ಲಿ ರನ್ನಮಹಾಕವಿಯ ಪ್ರತಿಭೆ ಮುಗಿಲುಮುಟ್ಟಿದೆ. ದುರ್ಯೋಧನನ ಜೊತೆಯಾಗಿ ಪ್ರತಿಯೊಬ್ಬ ವಾಚಕನೂ ಸಂಕಟದಿಂದ ಪರಿತಪಿಸುವಂತಹ ದಾರುಣಮಯ ಸನ್ನಿವೇಶಕ್ಕೆ ಮಹಾಕವಿ ನಮ್ಮನ್ನೆಲ್ಲ ಸೆಳೆದೊಯ್ದಿದ್ದಾನೆ. ದುರ್ಯೋಧನ ಕರ್ಣನಿಗಾಗಿ ಮಿಡಿದಷ್ಟು ಕಂಬನಿಯನ್ನು ಮತ್ತೆಲ್ಲೂ ಮಿಡಿದಿಲ್ಲ. ಸಾಹಸಧನ ಈ ಎಡೆಯಲ್ಲಿ ರಸಮಗ್ನನಾಗಿ ಅತ್ತು ವಾಚಕವೃಂದವನ್ನು ತನ್ನ ಕಂಬನಿಯಲ್ಲಿ ತೇಲಿಸುತ್ತಾನೆ. ತನ್ನ ದುರಾದೃಷ್ಟಕ್ಕಾಗಿ ತಾನೆ ಮರುಗಿ ಸಂಜಯನೊಡನೆ,

ಆರೊಡನೆ ನುಡಿವೆನಳ್ತಿಯೊ
ಳಾರೊಡನೋಲಗದೊಳಿರ್ಪೆನಾರೊಡನೆ ಸಮಂ |
ತಾರೊಗಿಪೆನೇರುವೆನಾ
ನಾರೊಡನೆನ್ನಣುಗರಿಲ್ಲದಿಭವಾಜಿಗಳಂ ||

"ಪ್ರೀತಿಯಿಂದ ಇನ್ನು ಯಾರೊಡನೆ ಮಾತಾಡಲಿ; ಓಲಗದಲ್ಲಿ ನನ್ನ ಜೊತೆಗೆ ಯಾರಿದ್ದಾರೆ; ಸಮಾಧಾನ ಚಿತ್ತದಿಂದ ಉಣ್ಣುವುದಕ್ಕೂ ನನ್ನ ಜೊತೆಗೆ ಒಬ್ಬರೂ ಇಲ್ಲದಂತಾದುದೆ; ಆನೆ ಕುದುರೆಗಳ ಮೇಲೆ

ನಾನೊಬ್ಬನೇ ಏರಬೇಕಾಯಿತೆ; ಕರ್ಣನೂ ಇಲ್ಲ; ದುಶ್ಶಾಸನನೂ ಇಲ್ಲ; ದುರ್ಯೋಧನನ ಬಾಳಿಗೆ ಕರ್ಣ ದುಶ್ಶಾಸನರಿಬ್ಬರೂ ಬೆಳಕಾಗಿದ್ದರು. ಇವರಿಬ್ಬರ ಸಲಹೆಯಿಲ್ಲದೆ ಸುಯೋಧನ ಯಾವ ಮಹತ್ಕಾರ್ಯಕ್ಕೂ ಕೈ ಹಾಕಿದವನಲ್ಲ. ಒಂದು ಪಕ್ಕ ದುಶ್ಶಾಸನ, ಇನ್ನೊಂದು ಪಕ್ಕ ಕರ್ಣ ನನ್ನು ಕೂರಿಸಿಕೊಂಡು ಮಹಾನುಭಾವನಾದ ದುರ್ಯೋಧನ ಪ್ರಮುಖ ರಾಜಕಾರ್ಯಗಳನ್ನೆಲ್ಲ ನಡೆಸಿದ. ಇವರಿಬ್ಬರೂ ಅವನ ಎರಡು ಕೈಗಳು; ಇವರಿಬ್ಬರೂ ಅವನ ಕಣ್ಣುಗಳು. ಅಂಥವರನ್ನು ಕಳೆಕೊಂಡು ಒಂಟಿ ಯಾಗುಳಿದ ಸುಯೋಧನನ ಅಳಲನ್ನು ರನ್ನನು ರಾಕವಿ ಕಲಾಯುಕ್ತ ವಾಗಿ ಚಿತ್ರಿಸಿ ನಮ್ಮನ್ನೆಲ್ಲ ಕಂಬನಿ ಮಿಡಿಯುವಂತೆ ಮಾಡಿದಾನೆ. ರನ್ನನ ಕಲೆ ಸಜೀವವಾದುದು; ಎಲ್ಲೆಲ್ಲೂ ಕಾವ್ಯರಸವನ್ನು ಹೊರಸೂಸು ವಂತಹುದು !

ಕರ್ಣನ ಕಳೇಬರವನ್ನು ದುರ್ಯೋಧನ ಬಿಟ್ಟುಹೋಗಲಾರದೆ ಹಂಬಲಿಸುತ್ತಿರುವಾಗ ಸಂಜಯ ಆತನಲ್ಲಿ ವೀರರಸ ಉದ್ರೇಕಗೊಳ್ಳು ವಂತೆ ಮಾಡುತ್ತಾನೆ.

ಪೆಂಡಿರ್ ಪಳಯಿಸುವಂದದೆ
ಗಂಡರ್ ಪಳಯಿಸಿದೊಡಾಯುಮಂ ಛಲಮುಂ ಕಟ್ಟ್ |
ಕೊಂಡೆಸಪರಾರೊಂ ಕುರುಕುಲ
ಮಂಡನ ನೀನೆತ್ತಿಕೊಂಡ ಛಲಮನೆ ಮೆರೆಯಾ ||

"ಸುಯೋಧನ, ನೀನು ಹೆಂಗಸಿನಂತೆ ಅಳುತ್ತಾ ಕುಳಿತೆಯಲ್ಲ: ನೀ ಸಿಂತೆಸಗಿದರೆ ಶೌರ್ಯವನ್ನೂ ಛಲವನ್ನೂ ತೋರುವರಿನ್ನಾರು: ನಿನ್ನ ಹುಟ್ಟುಗುಣವಾದ ಛಲವನ್ನು ಈಗಲೂ ಬಿಡದೆ ಶತ್ರುಗಳೊಡನೆ ಹೋರಾಡು." ಕರ್ಣನನ್ನು ನೆನೆದು ಸಂಕಟಪಡುತ್ತಿರುವ ದುರ್ಯೋ ಧನನ ಗಮನವನ್ನು ವೀರೋಚಿತಮಾರ್ಗಕ್ಕೆ ಸಂಜಯ ಸೆಳೆದಿದಾನೆ. ಹಿಂದೆ ತಾನೇಯುದ್ಧವನ್ನು ಬೇಡವೆಂದು ಹೇಳುತ್ತಿದ್ದವನು ಈಗ ದುರ್ಯೋಧನನನ್ನು ಹೋರಾಟಕ್ಕೆ ಪ್ರೇರಿಪಿಸಿದ್ದಾನೆ ! ಇದನ್ನುಳಿದು

ಬೇರೆ ಮಾರ್ಗವೇ ಕಾಣದಾಗಿದೆ ಈ ಕರುಣಾಳುವಿನ ಕಣ್ಣೀರನ್ನು ತಡೆಗಟ್ಟಲು !

ದರಹಾಸಪೇಶಲಂ ದಿ
ಕ್ಕರಿಗಮನಂ ಕನಕಪರ್ವತಪ್ರಾಂಶು ದಿನೇ ।
ಶ್ವರಸುತನ ರೂಪು ಚಿತ್ರಂ
ಬರೆದಂತಿರ್ಪುದು ಚಿತ್ತ ಭಿತ್ತಿಯೊಳಿನ್ನು ॥

"ಸಂಜಯ, ಕರ್ಣನರೂಪ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ: ಮುಗುಳ್ನಗೆಯನ್ನು ಸೂಸುತ್ತಿದ್ದ ಆತನ ಮೊಗವನ್ನು ಮರೆಯಲಾದೀತೆ: ದಿಗ್ಗಜದಂತೆ ಗಂಭೀರವಾದ ಆತನ ನಡಗೆಯನ್ನು ಎಂದಿಗೆ ಮರೆತೇನು; ಮೇರುವಿನಂತೆ ಉನ್ನತವಾದ ಆತನ ಮನೋಹರಾಕಾರ ಕಣ್ದಿರು ನಿಂದಂತಿದೆ: " ಮರೆತಷ್ಟೂ ಸುಯೋಧನನಿಗೆ ದುಃಖ ಮರುಕೊಳಿಸುವುದು: ನಾನಾರೂಪವನ್ನು ತಾಳಿ ಅಳಲು ಅಲೆಅಲೆಯಾಗಿ ಮತ್ತೆ ಮತ್ತೆ ಕಾಣಿಸಿಕೊಳ್ಳುವುದು. ಕರ್ಣನ ಸದ್ಗುಣಗಳು ದುರ್ಯೋಧನನ ನೆನಪಿಗೆ ಬಂದು ಒಮ್ಮೆ ಸಂಕಟವನ್ನಿತ್ತರೆ ಮತ್ತೊಮ್ಮೆ ಪ್ರತೀಕಾರವೆಸಗೆಂದು ಪನ್ನಗಕೇತನನನ್ನು ಪ್ರಚೋದಿಸುವುದು. ಈ ಸಂದರ್ಭದಲ್ಲಿ ಪಂಪಮಹಾಕವಿ ಕರ್ಣನಿಗಾಗಿ ಹಾಡಿರುವ ಚರಮಗೀತೆಯನ್ನು ನೆನೆವುದು ಸೂಕ್ತವಾಗಿದೆ.

ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನೊಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇರು ಕ ।
ರ್ಣನ ಕಡುನನ್ನಿ ಕರ್ಣನೊಳವಂಶದ ಕರ್ಣನ ಚಾಗಮೆಂದು ಕ
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ* ॥

" ಒಂದೇ ಮನಸ್ಸಿನಿಂದ ಭಾರತದಲ್ಲಿ ನೆನೆವಂತಾದರೆ ಕರ್ಣನೊಬ್ಬನನ್ನು ಮಾತ್ರ ನೆನೆಯಿರಿ; ಕರ್ಣನಿಗೆ ಸಮಾನರುಂಟೆ: ಕರ್ಣನಷ್ಟು

---

*ಪಂಪಭಾರತ ೧೨-೨೧೭

ಉನ್ನತಿಗೇರಿದವರಾರು: ಕರ್ಣನಂತೆ ಸತ್ಯಸಂಧನನ್ನೊಬ್ಬನಿದ್ದಾನೆಯೆ: ಮಹಾಪರಾಕ್ರಮಿಯಾದ ಕರ್ಣನ ತ್ಯಾಗ ಹಾಗೂ ಅವನ ಮಹತ್ತರ ಸುದ್ದಿಗಳನ್ನೊಳಗೊಂಡಿರುವುದರಿಂದ ಮಹಾಭಾರತ ಕರ್ಣರಸಾಯನವಾಯಿತು.”

ದುರ್ಯೋಧನನ ಸಂಕಲ್ಪ ಕೋಪವಾಗಿ ಪರಿಣಮಿಸಿ ಛಲ ಹೆಡೆಯೆತ್ತಿ ಸೇಡು ತೀರಿಸಿಕೊಳ್ಳಲು ಹಾತೊರೆದು ಕಾತರನಾಗಿ ನಡೆವಾಗ “ಎಲೆ ದೇವ, ಭೀಷ್ಮರಿತ್ತಲಿರ್ದಪರ್ ಇತ್ತ ಬಿಜಯಂಗೆಯ್ಯಿಂ, ಎಂತುಂ ನಿಜಗುರು ಪ್ರಾರ್ಥನಾಭಂಗಂ ಮಾಡಲಾಗದು, ಇನ್ನೀಂ ನೆಗಳ್ವ ಕಜ್ಜಮಾವುದುಮಂ ನಿಮ್ಮಜ್ಜನೊಳಾಲೋಚಿಸಿ ನೆಗಳ್ವುದು” ಎಂದು ಸಂಜಯ ಸುಯೋಧನನ ನೆರವಿಗೆ ಸಕಾಲದಲ್ಲಿ ಭೀಷ್ಮರ ಸುದ್ದಿಯನ್ನು ತಂದಿದ್ದಾನೆ. ಅನಾತಿಗೊಡಂಬಟ್ಟು ಸಾಹಸಧನ ಭೀಷ್ಮರ ಪಾದಕ್ಕೆರಗಲು ಆತುರನಾಗಿ ಹೋಗುತ್ತಾನೆ. ಹೆಜ್ಜೆ ಹೆಜ್ಜೆಗೂ ದುರ್ಯೋಧನನ ಮನೋದೌರ್ಬಲ್ಯವನ್ನು ಆತನ ಛಲವೇ ಹೊಡೆದೋಡಿಸುತ್ತಿರುವುದನ್ನು ರನ್ನಮಹಾಕವಿ ಮನಮುಟ್ಟುವಂತೆ ವಿವರಿಸಿ ಈತನನ್ನು ಸಾಹಸನನನ್ನಾಗಿ ಮಾಡಿದ್ದಾನೆ: ಛಲದಂಕಮಲ್ಲನೆಂದು ತೋರಿದ್ದಾನೆ: ಮಾನಸಿದ್ಧಿಯೆಂದು ಸಾರಿದ್ದಾನೆ. ದುರ್ಯೋಧನನ ಪಾತ್ರವನ್ನು ಛಲದ ನೆಲೆಗೇರಿಸಿ ಕ್ಷಾತ್ರವೀರ್ಯದ ಕಿರೀಟವನ್ನಿಟ್ಟು ಮಹಾಕವಿ ಈತನನ್ನು ಕೊಂಡಾಡಿ ಕೊಂಡಾಡಿ ತಣಿಯದಿದ್ದಾನೆ. ಕರ್ಣನ ಪಾತ್ರವನ್ನು ಕಡೆದು ಪಂಪಮಹಾಕವಿ ಹೇಗೆ ತನ್ನ ಅನುಪಮ ಕಲೆಯನ್ನು ಮೆರೆದಿದಾನೆಯೋ ಅಂತೆಯೇ ದುರ್ಯೋಧನನ ಪಾತ್ರವನ್ನು ಸರ್ವಾಂಗಸುಂದರವಾಗುವಂತೆ ಮಾಡಿ ಕವಿಚಕ್ರಿ ಕೃತಕೃತ್ಯನಾಗಿದಾನೆ. ವಿಕ್ರಮಾರ್ಜುನ ವಿಜಯ ಗದಾಯುದ್ಧಕ್ಕೆ ಪ್ರೇರಕವಾದರೂ ಇವೆರಡೂ ಒಂದಕ್ಕೊಂದು ಪೂರಕವಾಗಿವೆ !

———

## ಮೆಚ್ಚಿ ಪೊಗಳ್ದಂ ಮಂದಾಕಿನೀನಂದನಂ !

ಭೀಷ್ಮಾಚಾರ್ಯರು ಶರಶಯನದಲ್ಲಿ ಮಲಗಿದ್ದಾರೆ. ಬಾಣಗಳು ತನ್ನ ಮೈಗೆಲ್ಲ ಚುಚ್ಚಿ ಬಾಧೆಯುಂಟುಮಾಡಿದ್ದರೂ ಆಚಾರ್ಯರು ಮುಕುಂದನನ್ನು ಒಂದೇ ಮನಸ್ಸಿನಿಂದ ಸ್ಮರಿಸುತ್ತಿದ್ದಾರೆ. ಈ ಮಧ್ಯೆ ಕುರುಭೂಮಿಯಲ್ಲಿ ಏನಾಗಿದೆಯೋ ದುರ್ಯೋಧನನ ಪಾಡು ಎಂತಾದುದೋ ಎಂಬ ಯೋಚನೆಯೂ ಧ್ಯಾನದ ಜೊತೆಯಾಗಿ ಸೇರಿ ಆತನ ಮನಸ್ಸಿನಲ್ಲಿ ತುಂಬಿದ್ದಿತು. ಪರಮಯೋಗಿಯ ಮನದಲ್ಲೂ ಮೋಹ ಮರಕೊಳಿಸುವಂತೆ ಮಾಡಿದೆ ಸಾಹಸಧನನ ಅನುಪಮವಾದ ಬಾಳ್ವೆ ! ಈಯೆಡೆ ಸುಯೋಧನ ಸುಳಿದು ಭೀಷ್ಮರ ಅವಸ್ಥೆಯನ್ನು ಕಣ್ಣಾರೆ ಕಂಡು ನುಗ್ಗಿಬರುವ ಕಂಬನಿಯನ್ನು ತಡೆಯಲಾರದೆ ತಳಮಳಗೊಳ್ಳುತ್ತಾನೆ. "ತಾತ, ತಾವೆಲ್ಲ ಹೇಳಿದ ಹಿತವಚನಕ್ಕೆ ನಾನು ಗಮನಕೊಡದೆ ಭೀಮನ ಮೇಲಿದ್ದ ಬದ್ಧವೈರದಿಂದ ಕುರುಭೂಮಿಯನ್ನು ರಣರಂಗಮಾಡಿದೆ," "ಆನೆ ಕಾದಿಸಿದೆನ್ ಕಡಂಗಿದೆನ್ ಎನ್ನ ಪಾಪಕರ್ಮನ ಕತದಿಂದಂ ನಿಮಗಂ ಈಯಿರುವಾದುದೆ ಸಿಂಧುನಂದನ ! ", "ನಾವೇ ತಮನ್ನೂ ಯುದ್ಧಕ್ಕೆ ದಬ್ಬಿದೆ; ಪಾಪಿಯಾದ ನನ್ನಿಂದ ತಮಗೂ ಈ ಅವಸ್ಥೆ ಬಂದೊದಗಿತೆ" ಎಂದು ಮಮ್ಮಲ ಮರುಗುವನು. ಚಲಗಾರನಾದ ದುರ್ಯೋಧನನಿಗೂ ಆಗಾಗ ತನ್ನೊಬ್ಬನ ಆಕಾಂಕ್ಷೆಗಾಗಿ, ತನ್ನೊಬ್ಬನ ದ್ವೇಷದಿಂದಾಗಿ ಎನಿತುಮಂದಿ ಅನುಪಮ ವ್ಯಕ್ತಿಗಳು ಬಲಿಯಾಗಿ ಹೋದರೆಂದು ಕಳವಳ ಹುಟ್ಟುವುದು. ಆದರೂ ತನ್ನ ದುಃಖವನ್ನೆಲ್ಲಾ ದಮನಗೊಳಿಸಿ ಹೋರಾಟವನ್ನೇ ಮುಂದುವರಿಸುತ್ತಾನೆ. ಕರುಳನ್ನು ಕೊಯ್ಯುವಂತಹ ನೋವೂ ಕೂಡ ಸಾಹಸಧನನಲ್ಲಿ ಸಾಹಸವನ್ನು ಉದ್ದೀಪನಗೊಳಿಸುವುದನ್ನು ಹೆಜ್ಜೆ ಹೆಜ್ಜೆಗೂ ಮಹಾಕವಿ ಮನಮುಟ್ಟುವಂತೆ ವಿವರಿಸಿದ್ದಾನೆ.

ದುರ್ಯೋಧನನ ಕಾಲ ಸಪ್ಪಳವನ್ನು ಕೇಳಿ ಆಚಾರ್ಯರು ಕಣ್ಣನ್ನು ಅರೆ ಅಗಲಿಸಿದರು. ಕಣ್ಣುಗಳೋ ಬಿಳೀ ನೈದಿಲೆರೇಕುಗಳಿಗಿಂತ ಚಲುವಾಗಿದ್ದವು. ಇಂಥ ಚಲುವುಗಣ್ಣು ಕಿವಿತನಕ ಹರಡಿದ್ದವು. ಭೀಷ್ಮರ ಬಳಿಗೆ

ಸಂಜಯ ಬಂದು ಅತನ ಕಿವಿಯಲ್ಲಿ "ಅಜ್ಜ, ಕುರುಕುಲಭಾನು ಸುಯೋಧನನು ಬಂದಿದ್ದಾನೆ" ಎಂದಾಕ್ಷಣ ಭೀಷ್ಮಾಚಾರ್ಯರು ಯೋಗವನ್ನು ತೊರೆದು ಎಚ್ಚರಗೊಂಡರು. ದುರ್ಯೋಧನ ತನ್ನಜ್ಜನ ಕಾಲಿಗೆರಗಿದನು. ಈತನನ್ನು ಆಶೀರ್ವದಿಸಿ ದಿಗ್ಗಜಗಳ ಸೊಂಡಿಲಿನಂತಿದ್ದ ತನ್ನ ಕೈಗಳಿಂದ ತಬ್ಬಿಕೊಂಡು ಕಂಬನಿ ಮಿಡಿಯುತ್ತಾ,

ಧವಳ ಗಜೇಂದ್ರಮಂ ಧವಳ ಚಾಮರಮಂ ಧವಳಾತಪತ್ರಮಂ
ಧವಳ ವಿಲೋಚನೋತ್ಪಲ ವಧೂಜನಮಂ ಬಿರಸಪ್ಪದಿಕ್ತಟಂ ।
ಧವಳಿಸಿ ಕೀರ್ತಿಯಿಂ ಧವಳಮಂಗಳ ಗೇಯದಿನೊಪ್ಪಿ ಬರ್ಪ ಕೌ
ರವ ಧವಳಂಗೆ ದೇಸಿಗನೆ ಬರ್ಪವೊಲೀ ನಡೆ ಬರ್ಪದಾದುದೇ ॥

"ದುರ್ಯೋಧನ ಒಂಟಿಯಾಗಿ ಬಂದೆಯಲ್ಲ! ಏನಾಯಿತು? ನೀನು ಬರುವಾಗ ಬಿಳಿ ಚಾಮರಗಳು ಇಕ್ಕೆಲದಲ್ಲಿಲ್ಲವೆ? ಬೆಳ್ಗೊಡೆಯಿಲ್ಲದೆ ರಾಜಾಧಿರಾಜ ಬರಬಹುದೇ? ಬಿಳೀ ನೈದಿಲೆಯಂತೆ ಕಣ್ಣುಳ್ಳ ಕನ್ಯಾವೃಂದ ನಿನ್ನನ್ನು ಸದಾ ಸುತ್ತುರುತ್ತಿದ್ದರಲ್ಲ ಈಗ ಅವರೂ ಬಂದಿಲ್ಲವೆ? ನೀನು ಸುಳಿದಾಡಿದಾಗೆಲ್ಲ ಎಂಟು ದಿಕ್ಕುಗಳೂ ನಿನ್ನ ಕೀರ್ತಿಯಿಂದ ತುಂಬಿ ತುಳುಕುತ್ತಿದ್ದವು! ನಿನ್ನ ಜೊತೆಯಾಗಿ ಮಂಗಳಕರವಾದ ಧವಳರಾಗವೂ ಹರಿದು ಬರುತ್ತಿತ್ತು; ಇಷ್ಟೆಲ್ಲ ವೈಭವದಿಂದ ಬಾಳಿದ ನಿನಗೆ ಈಗ ಪರದೇಶಿಯಂತೆ ಒಂಟಿಯಾಗಿ ಬರುವಂತಾದುದೇ?" ಭೀಷ್ಮರಿಗೆ ದುರ್ಯೋಧನನ ಅವಸ್ಥೆಯನ್ನು ಕಂಡು ಕರುಳು ನುಲಿಚಿರಬೇಕು. ಏನಾದರೂ ಇಂತಹ ಸ್ಥಿತಿ ಈತನಿಗೆ ಬರಬಾರದಾಗಿತ್ತು ಎಂದುಕೊಂಡು ಕೊರಗುತ್ತಾರೆ. ನಿಷ್ಕಾಮಯೋಗಿಗೂ ಸುಯೋಧನನ್ನು ಕಂಡು ಒಂದೆಡೆ ಮೋಹ ಮತ್ತೊಂದೆಡೆ ಮರುಕ. ತನ್ನಜ್ಜನನ್ನು ಸುಯೋಧನ ಸಮಾಧಾನಗೊಳಿಸುವ ಪ್ರಸಂಗ ಇನ್ನೂ ಮನಮುರುಗಿಸುವಂತಹುದಾಗಿದೆ. "ತಿಳಿಯಬೇಕಾದುದನ್ನು ತಿಳಿದವರೂ ಆತ್ಮಜ್ಞಾನಿಯೂ ಆಗಿರುವ ತಾವೇ ಅಜ್ಞಾನಿಗಳಂತೆ ಆಡುವಿರಲ್ಲ" ಎಂದು ಸಮಾಧಾನಪಡಿಸಿದಾನೆ. ಇಲ್ಲಿ ದುರ್ಯೋಧನ ತತ್ವಜ್ಞಾನಿಯಾಗಿದಾನೆ. ಐಶ್ವರ್ಯ ಹಾಗೂ ವೈಭವ ಸ್ಥಿರವಾದುದಲ್ಲವೆಂಬುದನ್ನು ಅನುಭವಿಸಿ ತಿಳಿದಿದಾನೆ. ಇನ್ನೊಬ್ಬರಿಗೆ

ತಿಳಿಸಲೂ ಶಕ್ತನಾಗಿದಾನೆ. ಇಷ್ಟಾದರೂ ಭೀಷ್ಮರಿಗೆ ಮೋಹ ಹೋದಂತಿಲ್ಲ. ಏನಾದರೂ ಮಾಡಿ ಸುಯೋಧನನನ್ನೊಬ್ಬನ್ನಾದರೂ ಉಳಿಸಬೇಕೆಂಬ ಆಕಾಂಕ್ಷೆಯಿದೆ. ಕೇಳಲಿ ಬಿಡಲಿ ತನ್ನ ಕರ್ತವ್ಯವನ್ನು ಮಾಡಿ ಮುಗಿಸುವಂಥ ನಿಷ್ಕಾಮಯೋಗಿ ಈ ಮಹಾಶಯ! "ಮಗು, ಚಂದ್ರವಂಶ ಹಿಂದೆಂದೂ ಗೋತ್ರಕಲಹವೆಂಬುದನ್ನು ಕಂಡರಿಯದು: ನಿಮ್ಮ ಕಾಲಕ್ಕೆ ಅದನ್ನೂ ಕಾಣಬೇಕಾಯಿತು: ಈಗಲೂ ನಾನು ಹೇಳಿದಂತೆ ಕೇಳುವೆಯಾದರೆ ಇಂದೂ ಪಾಂಡವರರನ್ನೊಪ್ಪಿಸಿ ಸಂಧಿಗೇರ್ಪಾಡು ಮಾಡುತ್ತೇನೆ: ನೀವಿಬ್ಬರೂ ಹೊಂದಿಕೊಂಡು ಬಾಳುವಿರಂತೆ: ಪಾಂಡವರು ಎಂದೂ ನನ್ನ ಮಾತನ್ನು ಮೀರಲಾರರು; ನೀನೂ ನಾನಂದಂತೆ ನಡೆ." ಭೀಷ್ಮಾಚಾರ್ಯ ಮಾತುಮುಗಿಸುವುದಕ್ಕೆ ಮೊದಲೇ ಸುಯೋಧನ ನಸುನಕ್ಕನಂತೆ! "ಅಜ್ಜ, ನಾನು ಇಲ್ಲಿಗೆ ಬಂದಿರುವುದು ತಮಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಹೋಗುವುದಕ್ಕಾಗಿ ಅಂತಲ್ಲದೆ ಸಂಧಾನವೆಸಗಿಸೆಂದು ಬೇಡುವುದಕ್ಕಲ್ಲ. ಅಜ್ಜ, ಸಮರದಲ್ಲಿ ನಾನೆಸಗಬೇಕಾದ ಕಜ್ಜವೇನನ್ನಾದರೂ ಹೇಳುವಂತಿದ್ದರೆ ಹೇಳು; "

ನೆಲಕಿರಿವೆನೆಂದು ಬಗೆವಿರೆ
ಛಲಕಿರಿವೆಂ ಪಾಂಡುಸುತರೊಳೀ ನೆಲನಿದು ಪಾ।
ಳ್ನೆಲನೆನಗೆ ದಿನಪಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದುವಾಳ್ವಪೆನೇ ॥

"ತಾತ, ತಾವೂ ನನ್ನನ್ನು ತಪ್ಪು ತಿಳಿದಂತಿದೆ: ನೆಲಕ್ಕಾಗಿ ನಾನು ಎಂದೂ ಹೋರಾಡಿದವನಲ್ಲ; ಛಲಕ್ಕಾಗಿ ಪಾಂಡವರೊಡನೆ ಕಾದಾಡುತ್ತಿರುವೆನು; ಹಾಳು ನೆಲದಾಸೆಯನ್ನು ಎಂದೋ ತೊರೆದೆ; ಕರ್ಣನನ್ನು ಕೊಲಿಸಿದ ನೆಲದೊಡನೆ ಮತ್ತೆ ಹೊಂದಿಕೊಂಡು ಎಂದಿಗಾದರೂ ಬಾಳೇನೆ:" ಕರ್ಣನ ರಥವನ್ನು ಭೂದೇವಿ ನುಂಗಿದ್ದನ್ನು ದುರ್ಯೋಧನ ಕುರಿತು ಮುನಿದು ನುಡಿದಿರುವುದು ಸಂದರ್ಭಕ್ಕೆ ಉಚಿತವಾಗಿದೆ. ಹಾಗು ಕರ್ಣನ ಮೇಲೆ ಆತನಿಗಿರುವ ಅಪಾರ ಪ್ರೇಮವನ್ನು ಈ ಮಾತು ಸ್ಪಷ್ಟಗೊಳಿಸಿದೆ. "ಸಂಧಿಗೆಯ್ದೊಡೆ ಮುನಿವರ ಮೆಚ್ಚುವರ ನುಡಿಗೆ ಪಕ್ಕಾಗಿರೆನೇ" ದುರ್ಯೋ

ಧನವನ್ನು ಮಾನನಿಧಿಯೆನ್ನಲು ಈ ವಾಕ್ಯವೊಂದೇ ಸಾಲದೆ! ರನ್ನನ ಮಾತೆಂದರೆ ಸಾಸಿವೆಯಲ್ಲಿ ಸಾಗರವನ್ನಡಗಿಸುವಂತಹುದು.

"ಅಜ್ಜ, ಶತ್ರುಗಳನ್ನೆಲ್ಲ ಮೊದಲು ಕೊಲ್ಲುವೆನು: ಅವರ ಮಾಂಸವನ್ನು ಭೂತಗಳೆಲ್ಲ ತಿಂದು ತೇಗುವುದನ್ನು ನೋಡಿ ತಣಿಯುತ್ತೇನೆ: ವೈರಿಗಳ ಹೆಂಗಸರೆಲ್ಲ ಕಂಬನಿ ಹರಿಸುವಂತಾಗಬೇಕು: ತಮ್ಮವರನ್ನು ಕಳೆದುಕೊಂಡು ಕಣ್ಣೀರಿಡುತ್ತಿರುವ ನನ್ನ ಬಂಧುಗಳು ಸೇಡು ತೀರಿತೆಂದು ಮತ್ತೆ ನಗುವಂತಾಗಬೇಕು. ಇಷ್ಟಾಗದೆ ಈ ಫಣಿರಾಜಕೇತನ ಎಂದಿಗಾದರೂ ಸಂಧಿಗೊಡಂಬಟ್ಟಾನೆ."

ಪುದುವಾಳಲ್ಕೆಣಮಾ ದೆಂತುಮವರೊಳ್ ಸಂಧಾನಮಂ ಮಾಡಲಾ
ಗದು ನೀವಿಲ್ಲನೆಯಜ್ಜ ಬಿಲ್ಲಗುರುಗಳ್ ತಾವಿಲ್ಲದಾ ಕರ್ಣನಿ |
ಲ್ಲವೆ ದುಶ್ಶಾಸನನಿಲ್ಲದಾರೊಡನೆ ರಾಜ್ಯಂಗೆಯ್ವೆನಾರ್ಗೆನ್ನ ಸಂ
ಪದಮಂ ತೋರ್ವೆನಾರ್ಗೆ ತೋರಿ ಮೆರೆವೆಂ ನಾನಾವಿನೋದಂಗಳಂ ||

ತಾತ, ಅವರೊಡನೆ ಕೂಡಿ ಬಾಳಲು ಎಂದಿಗೂ ನಾನೊಪ್ಪಲಾರೆ: ಸಂಧಾನದ ಸುದ್ದಿಯನ್ನು ಮರೆತುಬಿಡಿ: ನಾನು ಒಂಟಿಯಾಗಿ ಹೇಗೆ ಬಾಳಲಿ: ನೀವಿಲ್ಲ, ದ್ರೋಣಾಚಾರ್ಯರಿಲ್ಲ, ಹೋಗಲಿ ಕರ್ಣನಾದರೂ ಉಳಿದನೆ? ಅವನೂ ಇಲ್ಲ: ಅಣುಗದಮ್ಮ ದುಶ್ಶಾಸನನ್ನೂ ಕಳಕೊಂಡೆ: ರಾಜ್ಯವಾಳಲು ನನ್ನ ಜೊತೆಗಾರಿದ್ದಾರೆ? ಸಂಪತ್ತನ್ನು ಯಾರ ಮುಂದೆ ತೋರಲಿ? ವಿನೋದಗಳನ್ನೂ ಯಾರಿಗೆ ತೋರಿಸಿ ಮೆರೆಯಲಿ?"
"ತಾತ, ತನ್ನ ಬಸಿರಲ್ಲಿ ಬಂದ ನೂರು ಜನರನ್ನೂ ಬಲಿಗೊಟ್ಟೆ; ಎಷ್ಟು ಬೆಳೆಯಬಹುದೋ ಅಷ್ಟು ಬೆಳೆದು ಹೋಗಿದೆ: ಸತ್ತವರು ಮತ್ತೆ ಹುಟ್ಟದೆ ಹೋಗುತ್ತಾರೆಯೆ: ಪಾಂಡವರನ್ನಿದಿರಿಸಿ ನನ್ನ ಹಟವನ್ನೇ ಸಾಧಿಸುತ್ತೇನೆ."

ಕಾದದಿರೆನಜ್ಜ ಪಾಂಡವ
ರಾದರ್ ಮೇಣೆಂದಿನೊಂದೆ ಸಮರದೊಳಾಂ ಮೇ |
ಣಾದೆನದರಿಂದೆ ಪಾಂಡವ
ರ್ಗಾದುದು ಮೇಣಾಯ್ತು ಕೌರವಂಗವನಿತಳಂ ||

"ಅಜ್ಜ, ಹೋರಾಟಕ್ಕೆ ಅಡ್ಡಿ ಬರಬೇಡ: ಇಂದಿನ ಯುದ್ಧದಲ್ಲಿ ಪಾಂಡವರೋ ಅಥವ ನಾನೋ ಅಂತು ಒಬ್ಬರು ಉಳಿಯುತ್ತೇವೆ: ಭೂಮಿಯನ್ನು ಪಾಂಡವರಾಳಲಿ ಇಲ್ಲವೇ ನಾನಾಳುವೆನು.'' ಪನ್ನಗಕೇತನನ ಪರಾಕ್ರಮಕ್ಕೆ ಸರಿಮಿಗಿಲಾಗಿ ಪ್ರತಿಷ್ಠೆ ಪ್ರಜ್ವಲಿಸಿದೆ. ಈ ಭಾಗವನ್ನೋದುತ್ತಾ ಸಾಹಸಧನನ ಸಾಹಸವನ್ನೂ ಛಲವನ್ನೂ ಕೊಂಡಾಡದ ಸಹೃದಯನಾರು ! ದುರ್ಯೋಧನನ ಮಾತೆಂದರೆ ಕಡ್ಡಿತುಂಡಾದಂತೆ ! ತನ್ನವರನ್ನೆಲ್ಲ ಕಳಕೊಂಡು ಸಹನೆಯಿಂದ ಎಂದಿಗಾದರೂ ಕೂಡಿಬಾಳಲು ಸಾಹಸಧನನ ಕೈಲಿ ಸಾಧ್ಯವೇ ? ದುರ್ಯೋಧನನ ಪಾತ್ರವನ್ನು ಚಿತ್ರಿಸುವಾಗ ರನ್ನನ ಕವಿತಾವೇಶ ಮೀರಿ ವೀರರಸ ತಾನೇ ತಾನಾಗಿ ಹರಿಯದಿರದು.

ತನ್ನ ಮೊಮ್ಮಗನ ಮಾತನ್ನು ಕೇಳಿ ಭೀಷ್ಮ ಬೆರಗಾದನಂತೆ; ಮತ್ತೆ ಮತ್ತೆ ಅಚ್ಚರಿಗೊಂಡು ತಲೆತೂಗಿದನಂತೆ. ದುರ್ಯೋಧನನ ಏಕಾಂಗ ಸಾಹಸ ಕುರುಕ್ಷೇತ್ರದಲ್ಲಿ ಪ್ರಕಟವಾದಂತೆ ಹಿಂದೆಂದೂ ಆಗಿರಲಿಲ್ಲ. ಮಹಾಪರಾಕ್ರಮಿಯಾದ ಗಾಂಗೇಯ ತನ್ನ ಮೊಮ್ಮಗನ ಸಾಹಸಕ್ಕೆ ಮೆಚ್ಚದಿರಲು ಸಾಧ್ಯವೆ ? ಒಂದೆಡೆ ಮೆಚ್ಚಿದರೆ ಮತ್ತೊಂದೆಡೆ ಮರುಕ. ರಣರಂಗದಲ್ಲಿ ಒಂಟಿಯಾದ ಸುಯೋಧನ ಎಲ್ಲಿ ಹತನಾದನೋ ಎಂದುಕೊಂಡು ನಿಷ್ಕಾಮಯೋಗಿ ಸಂಕಟಪಡುತ್ತಾನೆ.

ಶರಮೊಂದಂ ತೆಗೆದು ನಿಜೋ
ದರದಿಂ ಲೆಕ್ಕಣಿಕೆ ಮಾಡಿ ಗಜಮದ ಮಸಿಯಂ ।
ತರಿಸಿ ಪತಾಕಾ ಪಟದೊಳ್
ಬರೆದಟ್ಟಿದನಂಧನೃಪತಿಗಾ ಸಿಂಧುಸುತಂ ॥

"ತನ್ನ ರೋಮ ರೋಮಕ್ಕೂ ನಾಟಿದ್ದ ಶರಗಳಲ್ಲೊಂದನ್ನು ತೆಗೆದು ಗಜಮದಮಸಿಯಲ್ಲದ್ದಿ ಪತಾಕೆಯ ಬಟ್ಟೆಯಲ್ಲಿ ಪತ್ರವನ್ನು ಬರೆದು ಗಾಂಗೇಯ ಧೃತರಾಷ್ಟ್ರನಲ್ಲಿಗೆ ಕಳಿಸುವನು.'' "ಏನು ಮಾಡಿದರೂ ಸುಯೋಧನ ಸಂಧಿಗೊಡಂಬಡುವುದಿಲ್ಲ; ನೀವಾದರೂ ಬುದ್ಧಿ ಹೇಳಿ

ಮತ್ತೆ ಪಾಂಡವರೊಡನೆ ಹಿತ ಕೂಡಿ ಬಾಳುವಂತೆ ಮಾಡುವುದು'' ಎಂದು ಸಂಜಯನ ಕೈಲಿ ಅಂಧನೃಪತಿಗೆ ಸುದ್ದಿಯನ್ನು ಮುಟ್ಟಿಸುತ್ತಾನೆ.

ತನ್ನಿಂದ ಕುರುವಂಶಕ್ಕೇನೆ ಅಯಶಸ್ಸುಂಟಾದುದಕ್ಕಾಗಿ ದುರ್ಯೋಧನ ಆಗಾಗ ಮರುಗಿದರೂ ಅದು ಕ್ಷಣಿಕವಾದುದು, ಅವರ ಒಲವು ಸದಾ ಹೋರಾಟದ ಕಡೆಗೇನೆ.

ಈ ಯೆರಡುಮೆನ್ನ ನಿಡುದೋ
ಳಾಯುತ್ತಂ ವೀರವೃತ್ತಿ ಜಯಮೆಂಬುದು ದೈ |
ವಾಯತ್ತಮಜ್ಜ ಭರತಾ
ನ್ವಯಕ್ಕೆ ಕಲಂಕಮಾಗದಂತಿರೆ ನೆಗಳ್ವೆಂ ||

''ಅಜ್ಜ, ಪೌರುಷ ಯಾರ ಕೈಲೂ ಇಲ್ಲ, ನನ್ನ ಕೈಗಳಲ್ಲೀ ಇನ್ನೂ ಉಳಿದಿವೆ, ಜಯವೆಂಬುದು ದೇವರ ಕೈಲಿದೆ; ಒಟ್ಟಿನಲ್ಲಿ ಭರತ ವಂಶಕ್ಕೆ ಕಲಂಕ ಬಾರದಂತೆ ನಡೆಯುತ್ತೇನೆ.'' ''ವಿಪಕಯ್ವಂ ಬಿಡಿಮಜ್ಜ ಮಂಗಳ ಮಹಾಶ್ರೀ ಸಂಧಿ ಕಾರ್ಯಕ್ಕೆ ಲಂಘಿಸಿ ನಿನ್ನಯ ಮಾತನೊ ಮೆಗಂ'' ಎಂದು ಸುಯೋಧನನ ಕೆಚ್ಚೆದೆಯಿಂದ ನುಡಿವಾಗ, '' ಪಕ್ಕಕ್ಕಂ ತನೇಕಾಂಗ ಸಾಹಸಕಂ ವಿಸ್ಮಯಮುತ್ತು ಮೆಚ್ಚಿ ಪೊಗಳ್ದಂ ಮಂದಾಕಿನೀನಂದನಂ'' ಎನ್ನುತ್ತಾನೆ ರನ್ನಮಹಾಕವಿ. ಸುಯೋಧನನನ್ನು ಯಾರ ಯಾರ ಕೈಲಿ ಹೊಗಳಿಸಿದರೂ ಕವಿಗೆ ತೃಪ್ತಿಯಿಲ್ಲ.

ದುರ್ಯೋಧನನಿಗೆ ಬುದ್ಧಿ ಹೇಳಿದವರೆಲ್ಲ ತಾವೇ ಬುದ್ಧಿ ಕಲಿಯ ಬೇಕಾಗುವುದೇ ಹೊರತು ಆತನಂತೂ ಯಾರ ಮಾತಿಗೂ ಕಿವಿಗೊಡುವಂತಿಲ್ಲ. ಅವತಾರಪುರುಷನ ಸರ್ವಶಕ್ತಿಯೂ ಸಾಹಸಧನನ ಛಲವನ್ನು ಅಲುಗಿಸಲಾರದೇ ಹೋಯಿತು. ಧರ್ಮರಾಯನ ಬಾಯಲ್ಲೂ ಅನೃತವನ್ನಾಡಿಸಿ ಸರ್ವಶಕ್ತನೆನಿಸಿಕೊಂಡಾಗ್ಯೂ ಆತನ ಬೇಳೆ ದುರ್ಯೋಧನನ ಮುಂದೆ ಬೇಯಲಾರದೆ ಹೋಯಿತು. ಬಂಧುಮಿತ್ರರ ಕಳೇಬರಗಳು ದುರ್ಯೋಧನನ ಕರುಳನ್ನು ಕರಗಿಸಿದರೂ ಆತನ ದೃಢಸಂಕಲ್ಪ

ವನ್ನು ಕದಲಿಸಲಾರದೆ ಹೋದವು. ಅಂಧರಾದ ಧೃತರಾಷ್ಟ್ರ ಗಾಂಧಾರಿ ಯರ ಕಂಬನಿ ಕೌರವೇಂದ್ರನನ್ನು ಸಂಕಟದಲ್ಲಿ ಮುಸುಗಿಸಿದರೂ ಆತನ ಛಲವನ್ನು ಮುರಿಯಲಾರದೇ ಹೋಯಿತು. ಅನಾಸಕ್ತನಾದ ಭೀಷ್ಮಾ ಚಾರ್ಯರಿಗೂ ಈತನ ದುಃಸ್ಥಿತಿ ಮರುಕ ಹುಟ್ಟಿಸಿ ಮನ್ಮಲ ಮರುಗು ವಂತೆ ಮಾಡಿತು. ಆದರೆ ಪರಶುರಾಮನನ್ನು ಸಮರದಲ್ಲಿ ಸೋಲಿಸಿದ ಆ ಸಾಹಸವಂತನೂ ಸುಯೋಧನನ ಹಟದಿದಿರು ನಿರ್ಬಲನಾಗಿ ಹೋದ. ಹೆಚ್ಚೇನು, ಲೋಕದಲ್ಲಿ ಎಲ್ಲ ಶಕ್ತಿಗಳು ದುರ್ಯೋಧನನ ಛಲವನ್ನು ನಾನಾರೀತಿಯಲ್ಲಿ ಮಾರ್ಪಡಿಸಲು ಯತ್ನಿಸಿ ಕೊನೆಗೆ ತಾವೆ ಮಣಿದವೇ ಹೊರತು ಈ ಮಹಾನುಭಾವ ಎಲ್ಲಕ್ಕೂ ಅತೀತನಾಗಿ ಉಳಿದಿದಾನೆ. ರನ್ನಮಹಾಕವಿಯ ಪ್ರತಿಭಾರಾಶಿಯಲ್ಲಿ ಸಿಕ್ಕಿಕೊಂಡು ದುರ್ಯೋಧನನ ಪಾತ್ರ ಸಿದ್ಧರಸದಲ್ಲದ್ದಿದ ಲೋಹದಂತೆ ಮರುಹುಟ್ಟನ್ನು ಪಡೆದು ಪ್ರಜ್ವಲಿಸಿದೆ!

* * * *

ಕಾಲಹರಣದಿಂದಲೂ ದುರ್ಯೋಧನನ ಗಂಡಾಂತರವನ್ನು ನಿವಾ ರಿಸಬಹುದೆಂದುಕೊಂಡು "ಮಗು, ನನ್ನ ಮಾತಿಗೆ ಕಿವಿಗೊಡದೆ ಹೋರಾ ಟವೇ ನಿನ್ನ ಸಂಕಲ್ಪವಾದರೆ ತೀರ್ಥಯಾತ್ರೆಗೆ ಹೋದ ಬಲರಾಮ ಬರುವತನಕವಾದರೂ ತಲೆಮರೆಸಿಕೊಂಡಿರುವುದು ಮೇಲು; ನೀನು ಅಂತೆಸಗಿದರೆ ಅಶ್ವತ್ಥಾಮ ಕೃಪರೂ ನಿನಗೆ ಬಂದು ನೆರವೀಯಬಹುದು: ಜಲಮಂತ್ರ ವಿದ್ಯಾಭ್ಯಾಸವನ್ನು ಕೈಕೊಂಡು ವೈಶಂಪಾಯನ ಸರೋವರ ದಲ್ಲಿ ಮುಳುಗಿ ಹೇಗಾದರೂ ಇಂದಿನ ರಾತ್ರಿಯನ್ನು ಕಳೆದು, ನಾಳೆ ನಿನ್ನಿಷ್ಟದಂತೆ ನಡೆ" ಎಂಬುದಾಗಿ ಭೀಷ್ಮಾಚಾರ್ಯರು ನುಡಿದು ಜಲ ಮಂತ್ರವನ್ನು ಉಪದೇಶಿಸಿದರು. ಕೊನೆಗೆ ಇಷ್ಟಾದರೂ ಆಯಿತಲ್ಲ ಎಂದುಕೊಂಡು ದುರ್ಯೋಧನ ಗದೆಯನ್ನು ಭುಜಕ್ಕೇರಿಸಿ ಸಂಗ್ರಾಮ ಭೂಮಿಯಲ್ಲಿ ಮುನ್ನಡೆದ. ಏನಾದರೂ ಮಾಡಿ ಈತನೊಬ್ಬನನ್ನಾದರೂ ಉಳಿಸಬೇಕೆಂಬ ಆಕಾಂಕ್ಷೆ ಗಾಂಗೇಯನಿಗೆ! ಅನಾಸಕ್ತನಿಗೂ ಒಮ್ಮೊಮ್ಮೆ ಆಸಕ್ತಿ ಹುಟ್ಟುವುದನ್ನು ಕಾಣಬಹುದು. ಆದರೆ ಛಲವುಳಿದ ದುರ್ಯೋ

ಧನನನ್ನು ಕಂಡೇವೆ? ಎಂದೆಂದಿಗೂ ಅಸಾಧ್ಯವೆಂದು ಸಾರುವುದು ರನ್ನ ಮಹಾಕವಿಯ ಅನುಪಮ ಕಲಾಕೃತಿ!

"ಸಂಧಿ" ಎಂಬ ಮಾತೆತ್ತಿದಾಗ ಸಾಹಸಧನನ ಮನಕ್ಕಾಗುವ ನೋವಿನ ಮುಂದೆ ಆಪ್ತಮಿತ್ರರ ಸಾವಿನಿಂದಾದ ನೋವು ಏನೇನೂ ಅಲ್ಲ. "ಪಾಂಡವರು ನಿಸ್ಪೃಹರು; ಅವರೊಡನೆ ವಿರೋಧ ಬೇಡ; ಸುಮ್ಮನೆ ಹೊಂದಿಕೊಂಡು ಬಾಳು; ಎಂಬ ಮಾತನ್ನು ಕೇಳುವುದಕ್ಕಾಗಿ ವಿಧಿ ಎರಡು ಕಿವಿಗಳನ್ನು ಮಾಡಿದನೇ" ಎಂದು ಕೊರಗುತ್ತಾನೆ ರನ್ನನ ಮಾನನಿಧಿ! ಈ ಯೋಚನೆಯಲ್ಲೇ ನಡೆದು ವೈಶಂಪಾಯನದ ತಡಿಗೆ ಬಂದು ಹಿಂದು ಮುಂದಾಗಿ ನಡೆದು ಸರೋವರದಲ್ಲಿ ಮುಳುಗಿದ್ದಾಗ "ಚಿಃ ಎಂದವನಂ ರಾಜ್ಯಲಕ್ಷ್ಮಿ ತೇಸಿ ಬಿಸುಟ್ಟಳ್"

ತುರುವಂ ಕಳಿಸುವ ಕೃಷ್ಣೆಯ
ನಿರಿಯಂ ಪಿಡಿದುಚರ್ಗವೇಳ್ವ ಕೊಳನಂ ಪಿಂದುಂ ।
ಪೆರಗಾಗಿ ಪುಗುವ ದುರ್ನಯ
ಮಿರಿಸವೆ ಕೌರವನ ರಾಜ್ಯದಾಯದ ಕೇಡಂ ॥

ಹಿಂದುಮುಂದಾಗಿ ನಡೆದು ಸರೋವರವನ್ನು ಪ್ರವೇಶಿಸಿದ್ದರಿಂದ ಪನ್ನಗಕೇತನನನ್ನು ಚಿಃ ಎಂದು ರಾಜ್ಯಲಕ್ಷ್ಮಿ ತೊರೆದೇ ಬಿಟ್ಟಳು. "ಹಸುಗಳನ್ನು ಕದ್ದು ಹಿಡಿಸಿದ್ದಾಯಿತು; ದ್ರೌಪದಿಯ ಸೀರೆಯನ್ನು ಸೆಳಿಸಿದ್ದಾಯಿತು; ಈಗ ಕೊಳಕ್ಕೆ ಹಿಂದು ಮುಂದಾಗಿ ನುಗ್ಗಿದ್ದೂ ಆಯಿತು; ಇವೆಲ್ಲ ದುರ್ಯೋಧನನ ರಾಜ್ಯದ ಹಾಗೂ ಶೌರ್ಯದ ಅವನತಿಯ ಕುರುಹುಲ್ಲವೆ? ರನ್ನ ಮರೆತು ತನ್ನ ಆದರ್ಶಪಾತ್ರವನ್ನು ಹಳಿದಿದಾನೆ. ಆದರೂ ಸಹೃದಯರ ಮನದಲ್ಲಿ ದುರ್ಯೋಧನನಿಂದ ಹಿಂದಾದ ಅಕಾರ್ಯಗಳಲ್ಲೊಂದೂ ನೆನಪಿಗೆ ಬರುವಂತಿಲ್ಲ: ಬಂದರೂ ಬಹುಕಾಲ ನಿಲ್ಲುವಂತಿಲ್ಲ: ಅದಕ್ಕೆ ಕಾರಣ ಕುರುಕ್ಷೇತ್ರದಲ್ಲಿ ಕಳೇಬರಗಳಿದಿರು ಕೌರವೇಂದ್ರ ಮಿಡಿದ ಕಂಬನಿಗಡಲೇ! ಹಾಗು ಈತನ ವೀರೋಚಿತವಾದ ನಡತೆ ಸಹೃದಯರನ್ನು ಕರಗಿಸಿದೆ. ಇದರ ಜೊತೆಗೆ ರಣರಂಗ ಪ್ರಾರಂಭವಾದ ಮೇಲೆ

ಪಾಂಡವರ ವರ್ತನೆ ಹೆಜ್ಜೆ ಹೆಜ್ಜೆಗೂ ಅಸಭ್ಯವೂ ಅನಾರ್ಯವೂ ಆಗುತ್ತಿರುವು ದನ್ನು ಎಲ್ಲರೂ ಬಲ್ಲರು. ಕೌರವನ ಬಾಳಿನ ಪೂರ್ವಾರ್ಧ ಅಮಾನುಷ ವಾಗಿದ್ದರೂ ಉತ್ತರಾರ್ಧ ಪವಿತ್ರವಾಗಿಯೂ ಸಾಹಸಯುಕ್ತವಾಗಿಯೂ ಕೂಡಿ ಹಿಂದೆ ಆತನೆಸಗಿದ ನೀಚಕೃತ್ಯಗಳನ್ನು ಲೋಕ ಮರೆವಂತಾಗಿದೆ. ಇನ್ನೊಂದು ಕಡೆ ಪಾಂಡವರು ಗೆಲುವನ್ನು ಪಡೆಯುವ ಆತುರದಲ್ಲಿ ಆಶೆ ಯಲ್ಲಿ ಅನುಚಿತವಾಗಿ ಆಚರಿಸಿ ಸಹೃದಯರ ಸಹಾನುಭೂತಿಯನ್ನು ಕಳೆದುಕೊಂಡಿದಾರೆ. ದೇವರು ಪಾಂಡವರ ಕಡೆಗಿದಾನೆ! ಸಹೃದಯರು ಒಂಟಿಯಾದ ಕೌರವೇಂದ್ರನ ಕಡೆಗಿದಾರೆ! ಈಗ ಹಿಂದು ಮುಂದಾಗಿ ಕುರುರಾಜ ನಡೆದುದನ್ನು ಕೇಳಿ ಯಾವ ಸಹೃದಯನೂ ಮುನಿಯಲಾರ, ಅದಕ್ಕೆ ಬದಲಾಗಿ ನುಗ್ಗು, ಒಟ್ಟಿನಲ್ಲಿ ನೀನೊಬ್ಬನಾದರೂ ಬದುಕಿಕೋ ಎನ್ನುತ್ತಾ ಬೆಂಬಲನಾಗದೆ ಇರಲಾರನು.

ದುರ್ಯೋಧನನು ಸರೋವರವನ್ನು ಪ್ರವೇಶಿಸಿದಾಗ ಅದರಲ್ಲಿದ್ದ ನೀರ್ವಕ್ಕಿಗಳೆಲ್ಲ ಕೂಗಿಕೊಂಡು ಹಾರಿಹೋದುದನ್ನು ರನ್ನ ಚಮತ್ಕಾರವಾಗಿ ವಿವರಿಸಿದಾನೆ; "ದುರಾತ್ಮ, ಖಳ, ನಿನ್ನನ್ನು ನಾವು ಇಲ್ಲಿ ಸೇರಗೊಟ್ಟರೆ ಭೀಮಕೋಪಕ್ಕೆ ತುತ್ತಾಗಿ ನಿನ್ನೊಡನೆ ನಾವೂ ಸಾಯಬೇಕಾಗುವುದು" ಎಂದುಕೊಂಡು ಹಾರಿದವಂತೆ. ತನ್ನ ದೇಹಕ್ಕಂಟಿದ್ದ ನೆತ್ತರನ್ನೆಲ್ಲಾ ತೊಳೆದು, ಕೈಕಾಲು ಮೊಗ ತೊಳೆದು ಜಲದೇವತೆಗಳಿಗೆ ನಮಸ್ಕರಿಸಿ ಜಲ ಮಂತ್ರವನ್ನು ಪಠಿಸುತ್ತಾ ಮುಳುಗಿ ನೀರಿನಲ್ಲಡಗಿಕೊಂಡು ಯೋಗಿಯಂತೆ ದುರ್ಯೋಧನ ತಪವೆಸಗುತ್ತಿದಾನೆ. ಈ ತಾಣಕ್ಕೆ ನುಗ್ಗಿರುವ ಸಹೃದ ಯರೆಲ್ಲ ಆತನಿರುವಿಕೆಯನ್ನು ಯಾರಿಗೂ ತಿಳಿಸದೆ ತವಕಗೊಂಡು ಕಾಯು ತ್ತಿರುತ್ತೇವೆ; ಪಾಂಡವರು ನಮ್ಮಮೇಲೆ ಮುನಿದರೂ ಚಿಂತೆಯಿಲ್ಲ. ಅವ ತಾರಪುರುಷ ಹಲ್ಲುಕಡಿದರೂ ಪರವಾಯಿಲ್ಲವೆಂದುಕೊಂಡು ನಾವೆಲ್ಲ ದುರ್ಯೋಧನನ ಪಕ್ಷ ವಹಿಸಿ ವಾದಿಸುವಂತೆ ರನ್ನಮಹಾಕವಿ ತನ್ನ ಕಲೆಯ ಬೆಡಗನ್ನು ಮೆರೆದಿದಾನೆ. ಸರೋವರದ ತಡಿಯಲ್ಲಿ ಮಾತ್ರ ದುರ್ಯೋಧನನನ್ನು ಈ ಮಹಾಕವಿ ಹಳಿದು ಇರಿವ ಬೆಡಂಗನನ್ನು ಮೆಚ್ಚಿ ಸಿರಬಹುದು; ಆದರೆ ಸಹೃದಯರನ್ನು ಮೆಚ್ಚಿಸಲಾರ. ಸಾಹಸಧನ ನೀರಿ

ನಲ್ಲಿ ಮುಳುಗಿದ್ದು ಭೀಷ್ಮರ ನುಡಿಗಾಗಿ: ಹಿಂದು ಮುಂದಾಗಿ ನಡೆದರೂ ಏನಂತೆ, ಪಾಂಡವರು ಮಾಡಿರುವ ಅನ್ಯಾಯದಿದಿರು ಕುತಂತ್ರದಿದಿರು ಈತನ ಈಗಿನ ಕೃತಿ ಏನೇನೂ ಅಲ್ಲ ಎಂದು ವಾದಿಸದಿರಲು, ಉಪಾದಿಸದಿರಲು ಸಾಧ್ಯವೆ ?

---

## ನೀರೊಳಗಿರ್ದಂ ಬೆಮರ್ತನುರುಗಪತಾಕಂ !

ಕೌರವರನ್ನೆಲ್ಲ ಭೀಮಸೇನನೊಬ್ಬನೆ ಹೇಳ ಹೆಸರಿಲ್ಲವಂತೆ ಅಳಿಸಿದ. ದ್ರೌಪದಿಯ ಮಾನಭಂಗವೆಸಗಿದ್ದ ದುಶ್ಶಾಸನನನ್ನು ಕೊಂದು ಅವನ ಕರುಳ ಮಾಲೆಯಿಂದ ದ್ರೌಪದಿಗೆ ಸಿಂಗರಿಸಿದ್ದೂ ಆಯಿತು. ಇನ್ನು ದುರ್ಯೋಧನನೊಬ್ಬ ಉಳಿದಿದ್ದಾನೆ. ಅವನನ್ನು ಕೊಂದು ಕೂಗುವ ಆತುರ ಭೀಮಸೇನನಿಗೆ. ಅವನನ್ನು ಕೊಲ್ಲುವತನಕ ದ್ರೌಪದಿಯ ಮನಕ್ಕೆ ನೆಮ್ಮದಿಯಿಲ್ಲ. ಭೀಮನನ್ನು ಹೆಜ್ಜೆ ಹೆಜ್ಜೆಗೂ ಹಿಂಬಾಲಿಸಿ ಸುಯೋಧನನನ್ನು ಕೊಲ್ಲಬೇಕೆಂದು ಪೀಡಿಸುತ್ತಿದ್ದಾಳೆ. ಎಷ್ಟು ಹುಡುಕಿದರೂ ಆತನ ಸುಳಿವುಗಾಣದೆ ಭೀಮ ಕೋಪೋದ್ರೇಕದಿಂದ ಸಿಡಿದು ಬೀಳುತ್ತಿರುವನು.

ತೊದಳಾಯ್ತಿನ್ನೆಯು ಪೂಣ್ದುಪೂಣ್ಕೆ ಸಭೆಯೊಳ್ ! ಪಾಂಚಾಲರಾಜಾತ್ಮಜಾ
ವದನಮ್ಲಾನತೆ ಪೋಗದಿಲ್ಲ ಗಡ ! ಮದ್ದೋರ್ದಂಡಕಂಡೂತಿ ತೀ |
ರ್ದುದುಮಿಲ್ಲಿನ್ನುಮೊಳಂ ಸುಯೋಧನನದರ್ಕೇಗೆಯ್ವೆನೆಂತಕ್ಕುಮೆಂ
ಬುದನೆಂದುತ್ಸುಕಚಿತ್ತನುಮ್ಮಳಿಸಿದಂ ಕೌರವ್ಯಕೋಲಾಹಳಂ ||

"ಸಭೆಯಲ್ಲಿ ನಾನೆಸಗಿದ ಶಪಥ ನಿರರ್ಥಕವಾಯಿತೆ ! ದ್ರೌಪದಿಯ ಕಂದಿಹೋದ ಮುಖ ಇನ್ನೂ ಹಾಗೆ ಇದೆಯೆ ! ನನ್ನ ತೋಳ ಕಡಿತ ತೀರುವ ವೇಳೆ ಇನ್ನೂ ಬರಲಿಲ್ಲವೆ ! ಇಷ್ಟೆಲ್ಲಕ್ಕೂ ಕಾರಣನಾದ ದುರ್ಯೋಧನ ಇನ್ನೂ ಬದುಕಿದಾನಲ್ಲ ! ಏನು ಮಾಡಲಿ ! ಹೇಗೆ ಅವನನ್ನು ಕೊಂದೇನು !" ಕಾತರಗೊಂಡ ಕೌರವಕೋಲಾಹಳ ಈ ರೀತಿ ಕಳವಳ ಪಟ್ಟಿದಾನೆ, "ಕೌರವನ ತೊಡೆ ಎಂದಿಗೆ ಮುರಿದೇನು ! ಅವನ ಶಿರವನ್ನು ಎಂದಿಗೆ

ನುಚ್ಚು ನೂರಾಗುವಂತೆ ತುಳಿದೇನು ! ಅವನ ರಕ್ತರಾಶಿಯಲ್ಲಿ ಮುಳುಗಿ ನನ್ನ ಕೋಪವನ್ನು ಎಂದಿಗೆ ಆರಿಸಿಯೇನು ! '' ಎಂಬ ಚಿಂತೆಯಲ್ಲಿ ಭೀಮ ಸೇನ ಕಿಡಿ ಕಿಡಿ ಹೋಗಿ ಮೀಸೆಯನ್ನು ಕಡಿದು,

ಮೀರಿದ ಪಗೆವನ ಪಟ್ಟಂ
ಪಾರಿಸುವೆನೊ ಮುನ್ನಮಮರರುಂಡಮೃತಮುವೇಂ ।
ಕಾರಿಸುವೆನೊ ಖಚರರನಡ
ರ್ದೇರಿಸುವೆನೊ ಮೇರುಗಿರಿಯ ತೂರಲ ತುದಿಯಂ ॥

"ಮೀರಿ ಮೆರೆದ ಹಗೆಯ ತಲೆಯನ್ನು ಹಾರಿಸದೆ ಬಿಡುವೆನೆ ! ಅಮರ ರುಂಡ ಅಮೃತವನ್ನು ಕಕ್ಕುವಂತೆ ಮಾಡೇನು ! ದೇವತೆಗಳನ್ನೆಲ್ಲ ಮೇರುವಿನ ತುಟ್ಟತುದಿಗೆ ಎಸೆದೇನು ! ''

ಎತ್ತುವೆನೊ ಮಂದರಾದ್ರಿಯ
ನೊತ್ತುವೆನೊ ರಸಾತಳಕ್ಕೆ ನೆಲನಂ ದೆಸೆಯಂ ।
ಪತ್ತುವೆನೊ ಪಗೆಯ ಬೆನ್ನಂ
ಪತ್ತುವೆನೊ ದಿಶಾಗಜಂಗಳಂ ತುತ್ತುವೆನೋ ॥

ಮಂದರಪರ್ವತವನ್ನೇ ಬುಡಸಹಿತ ಕಿತ್ತು ಮೇಲೆತ್ತುವೆನು ! ಭೂಗೋಳವನ್ನೇ ಪಾತಾಳಕ್ಕೆ ತುಳಿದೇನು ! ದಿಕ್ಕುಗಳ ಗತಿಯೂ ಅದೇ ಆದೀತು ! ವೈರಿಯ ಬೆನ್ನಿನ ಮೇಲೆ ಹತ್ತಿ ಕೊಲ್ಲದೆ ಬಿಡುವೆನೆ ? ದಿಗ್ಗಜ ಗಳ ಮೇಲೇರೇನು ಅಥವ ಅವನ್ನೇ ಕಬಳಿಸಿದರೂ ಕಬಳಿಸಿದೆ !

ದಾಂಟುವೆನೊ ಕುಲನಗಂಗಳ
ನೀಂಟುವೆನೊ ಚತುಸ್ಸಮುದ್ರಮಂ ರವಿಶಶಿಯಂ ।
ಮೀಂಟುವೆನೊ ಗಗನತಳದಿಂ
ಗಂಟಲನೊತ್ತುವೆನೊ ಸಕಲದಿಕ್ಪಾಲಕರಂ ॥

"ಕುಲಪರ್ವತಗಳನ್ನು ದಾಟಲೂ ಹಿಂಜರಿಯಲಾರೆ ! ನಾಲ್ಕು ಮಹಾಸಾಗರಗಳನ್ನೆಲ್ಲ ಬಾಯಿಗೆ ಬಸಿದೇನು ! ಅಂಬರತಳದಿಂದ ಸೂರ್ಯ

ಚಂದ್ರರಿಬ್ಬರನ್ನೂ ನೆಲಕ್ಕುರುಳಿಸೀನು! ದಿಕ್ಪಾಲಕರ ಗಂಟಲಸೊತ್ತಿದೆ. ಬಿಟ್ಟೇನು?" ದುರ್ಯೋಧನರ ಸಿಕ್ಕದೆ ಹೋದರೆ ಮೂರುಲೋಕದ ಚರಾಚರಗಳಲ್ಲಿ ಭೀಮಸೇನ ಒಂದನ್ನೂ ಉಳಿಸುವಂತಿಲ್ಲ. ಭೀಮಕೋಪಕ್ಕೆ ತುತ್ತಾದವರಲ್ಲಿ ಯಾರಾದರೂ ಎಂದಾದರೂ ಉಳಿದಿದ್ದಾರೆಯೇ?" ದುರ್ಯೋಧನನ ಇರುವಿಕೆಯನ್ನು ತೋರಿಸಿಕೊಡದೇ ಹೋದರೆ ಭೀಮಸೇನ ಕಾಲರುದ್ರನಾಗಿ ಲೋಕಾಲೋಕಗಳನ್ನೆಲ್ಲ ಸುಟ್ಟುರಿಸುವನಂತೆ! ಅತಿ ಮಾನವನ ಕೋಪೋದ್ರೇಕವನ್ನು ಮಹಾಕವಿ ಸಾಕಾರಗೊಳಿಸಿದ್ದಾನೆ. ಪ್ರತಿಯೊಂದು ಮಾತಿನಲ್ಲೂ ಭೀಮಸೇನನ ಪ್ರತಿರೂಪ ಪೂರ್ಣವಾಗಿ ಕಿಡಿಗೆದರಿ ಕಾಣುವಂತೆ ಕವಿಚಕ್ರವರ್ತಿ ನಿರೂಪಿಸಿದ್ದಾನೆ:

"ಎಂದು ಕುರುಕುಲಕೃತಾಂತಕಂ ಅಂತಕನುಂ ಮಾನುಸಕಂ ಮಸಗಿ ಪ್ರಳಯಕಲ್ಪಸಂಕಲ್ಪಂಗೆಯ್ದು" ಎಂಬುದಾಗಿ ಮಹಾಕವಿ ಸಂದರ್ಭವನ್ನು ಸಚಿತ್ರವಾಗಿ ಚಿತ್ರಿಸಿದಾನೆ. ಕುರುಕುಲಕೃತಾಂತಕ ಯಮನಂತೆ ಮಾನುಸಕಂ ಮಸಗಿದನಂತೆ. ಇಷ್ಟೇ ಅಲ್ಲ, ಪ್ರಳಯಕಲ್ಪ ಸಂಕಲ್ಪವನ್ನೂ ತೊಟ್ಟನಂತೆ.

ರಸೆಗಿಳಿದನೊ ಮೇಣ್ ನಾಲ್ಕುಂ
ದೆಸೆಗಳ ಕೋಣೆಗಳೊಳುಳಿದನೋ ಖಳನಿಲ್ಲೀ!
ವಸುಮತಿಯೊಳ್ ಗಾಂಧಾರಿಯ
ಬಸಿರಂ ಮೇಣ್ ಮಗುಳೆ ಪೋಗಿ ಪೊಕ್ಕಿರ್ದಪನೋ ||

"ದುರ್ಯೋಧನ ಪಾತಾಳಕ್ಕೇನಾದರೂ ಇಳಿದು ಅಡಗಿದನೇ! ಅಥವಾ ನಾಲ್ಕುದಿಕ್ಕುಗಳ ಕೋಣೆಯಲ್ಲಿ ತಲೆಮರೆಸಿಕೊಂಡಿರಬಹುದೇ! ಭೂಮಿಯಲ್ಲೇ ಗಾಂಧಾರಿಯ ಗರ್ಭಕ್ಕೆ ಮತ್ತೆ ನುಗ್ಗಿ ಬಚ್ಚಿಟ್ಟುಕೊಂಡಿರಬಹುದೇ!" "ಗಾಂಧಾರಿಯ ಬಸಿರಂ ಮೇಣ್ ಮಗುಳೆ ಪೋಗಿ ಪೊಕ್ಕಿರ್ದಪನೋ" ಎಂಬ ಮಾತು ಧ್ವನಿಪೂರ್ಣವಾಗಿವೆ. ಮಗನ ಮೇಲಿನ ಮೋಹದಿಂದ ದುರ್ಯೋಧನನನ್ನು ಗಾಂಧಾರಿ ಎಲ್ಲಾದರೂ ರಕ್ಷಿಸಿರಬಹುದೇ ಎಂಬ ಸಂದೇಹ ಕಲಾಪೂರ್ಣವಾದುದು. ಈ ಮಾತು

ಮಹಾಕವಿಯ ಮಹಾವಾಕ್ಯ! ಭೀಮಸೇನನ ಒಂದೊಂದು ವಾಕ್ಯವೂ ಓದುಗರನ್ನು ಬೆರಗುಗೊಳಿಸಿ ಬೆಚ್ಚಿಸದಿರದು.

ಚರಮಚರಮೆಂಬ ಜಗದಂ
ತರದೊಳ್ ಖಳನೆಲ್ಲಿ ಪೊಕ್ಕೊಡಂ ತದ್ಭುಜಸಂ ।
ಜರದೊಳಗಿರ್ದೊಡೆ ಹರಿಹರ
ಹಿರಣ್ಯಗರ್ಭರ್ಕಳಲ್ಲಿಯುಂ ಕೊಲ್ಲದಿರೆಂ ॥

"ಚರಾಚರ ಜಗತ್ತಿನಲ್ಲಿ ಅವನೆಲ್ಲೇ ಅಡಗಿರಲಿ ಹರಿ ಹರ ಬ್ರಹ್ಮಾದಿಗಳು ಆತನನ್ನು ರಕ್ಷಿಸಲು ತಮ್ಮ ಭುಜಪಂಜರದಲ್ಲಿ ಅಡಗಿಸಿಕೊಂಡಿದ್ದರೂ ಕೊಲ್ಲದೆ ಬಿಡಲಾರೆ"

ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ತಾತ ಮಾ
ರುತ ಕೇಳ್ ಮಾರುತಮಾರ್ಗ ಕೇಳ್ ಪಗೆವನಂ ಕೊಂದೆನ್ನ ಕೋಪಾಗ್ನಿಗಾ ।
ಹುತಿ ಮಾಳ್ಪೆಂ ಕೊಲಲಾರದಂದು ತರಿಸಂದಾನೆನ್ನ ಸಂದಗ್ನಿಗಾ
ಹುತಿ ಮಾಳ್ಪೆಂ ಗಡಿಮೆಂದು ಪೂಣ್ದೊದರಿದಂ ಕೌರವ್ಯಕೋಳಾಹಳಂ ॥

"ನಾಲ್ಕು ಎಲ್ಲೆಯುಳ್ಳ ಭೂದೇವಿಯೇ ಕೇಳು, ಅಗ್ನಿದೇವ, ನೀನು ಕೇಳು, ತಂದೆಯಾದ ವಾಯುವೇ ನೀನು ಕೇಳು, ವಿಸ್ತಾರವಾದ ಅಂಬರವೇ ನೀನು ಕೇಳು; ಹಗೆಯನ್ನು ಕೊಂದು ನನ್ನ ಕೋಪಾಗ್ನಿಗೆ ಆಹುತಿ ಮಾಡುವೆನು; ಆ ಕಾರ್ಯ ನನ್ನಿಂದಾಗದೆ ಹೋದರೆ ಅಗ್ನಿಗೆ ನಾನೇ ಬಿದ್ದು ಬೆಂದು ಹೋಗುತ್ತೇನೆ" ಎಂದು ಭೀಮಸೇನ ಪೂಣ್ದು ಒದರಿದನಂತೆ. ಇನ್ನು ದುರ್ಯೋಧನನನ್ನುಳಿಸಲು ಯಾರೂ ಮುಂದು ಬರುವಂತಿಲ್ಲ. ಸಂಧಾನದ ಸುದ್ದಿ ಯಾರೂ ಎತ್ತದಂತಾಯಿತು.

ಪ್ರತಿಜ್ಞೆ ಮಾಡಿ ಭೀಮಸೇನ ಧರ್ಮರಾಯನಲ್ಲಿಗೆ ಬರುವನು. ಇನ್ನೂ ಈತನ ಸಿಟ್ಟು ಇಳಿದಿಲ್ಲ. ಕಣ್ಣಿಗೆ ಬಿದ್ದವರ ಮೇಲೆಲ್ಲ ಕೂಗಾಡುವನು. ಧರ್ಮರಾಯನನ್ನೂ ಮೂದಲಿಸಲು ಹಿಂದುಮುಂದು ನೋಡುವು

ದಿಲ್ಲ. ಒಮ್ಮೆ ಕೆರಳಿದ ಮೇಲೆ ಭೀಮನನ್ನು ಸಮಾಧಾನಮಾಡುವುದು ಕಷ್ಟ. ಆತನ ಸಂಸ್ಕಾರವೇ ಅಂತಹುದು. ಯಾರಿಗೂ ತಾನು ತೊಂದರೆ ಕೊಡುವುದಿಲ್ಲ. ತೊಂದರೆ ಯಾರಿಂದಲಾದರೂ ತನಗಾದರೆ ಅವರನ್ನು ಉಳಿಸುವುದೂ ಇಲ್ಲ. ಸಣ್ಣ ಪುಟ್ಟ ಕಾರಣಕ್ಕೆ ಎಂದೂ ಮಾರುತಿ ಮುಳಿದವನೂ ಅಲ್ಲ. ಮುಳಿಸು ಬಂದ ಮೇಲೆ ಮುಯ್ಯಿ ತೀರದೆ ಮಾಯ ವಾಗುವುದೂ ಇಲ್ಲ.

ಎನಿತಂ ದ್ರೌಪದಿ ಮುಕ್ತಕೇಶಿ ನವೆವಳ್ ತದ್ದುಃಖಮುಂ ಕಂಡು ಕಂ
ಡೆನಿತಂ ಸೈರಿಪೆನಾನುಮೆನ್ನನುಜರುಂ ಪಾಂಚಾಲಿಯುಂ ನೋಡಿ ನೀಂ ।
ಮನದೊಳ್ ನೋವುದುಮಿಲ್ಲ ನಿಷ್ಕರುಣಿಯಾಯ್ ನೀನಿಂತಿರಾನನ್ನೆಗಂ
ಮುನಿಸಂ ತೀರ್ಚಿ ನರೇಂದ್ರವೈರಿತರುವಂ ನಿರ್ಮೂಲನಂ ಮಾಡುವೆಂ ||

ತಲೆ ಬಿರಿಹೊಯ್ದುಕೊಂಡು ದ್ರೌಪದಿ ಎಷ್ಟು ನವೆದು ಹೋಗಿದಾಳೆ! ಆಕೆಯ ಸಂಕಟವನ್ನು ಕಂಡು ಕಂಡು ನಾನು ಮತ್ತು ನನ್ನನುಜರೆಲ್ಲ ಎಷ್ಟೆಂದು ಸೈರಿಸೋಣ ! ಪಾಂಚಲಿಯ ದುರವಸ್ಥೆಯನ್ನು ನೋಡಿಯೂ ನಿನಗೆ ಮರುಕ ಹುಟ್ಟಲಿಲ್ಲವೆ ? ನಿನ್ನಂಥ ನಿಷ್ಕರುಣಿ ಇನ್ನೊಬ್ಬನಿಲ್ಲ! ನೀನು ಹೀಗೆ ಇರು. ಅಷ್ಟರಲ್ಲೇ ನಾನು ನನ್ನ ಮುನಿಸನ್ನು ತೀರಿಸಿ ಕೊಳ್ಳುತ್ತೇನೆ ! ಶತ್ರುಪಕ್ಷವನ್ನು ಬುಡಸಹಿತ ನಿರ್ನಾಮಮಾಡುವೆನು."
"ನಾನುಂ ವಿಧೇಯನಲ್ಲ ನೀನುಂ ಗುರುವಲ್ಲವಿಂದಿನೊಂದೆಸೆವಸದೊಳ್"

ಮುಂದಲೆಯಂ ಪಿಡಿದೆನ್ನಯ .
ಮುಂದೆಳೆದನಲಜೆಯನುಯ್ದು ಪರಿಭವಿಸಿಯೆ ದ ।
ಳ್ಳೆಂದುರಿದು ಸೊರ್ಕಿದವನಂ
ಕೊಂದೆಂ ಕುರುಪತಿಯುಮುಂ ಕೊಲಲ್ ತಡೆವನೆನೇ ||

"ದ್ರೌಪದಿಯ ಮುಂದಲೆ ಹಿಡಿದು ದರದರ ಎಳೆದಾಡಿ ಬಂದು ತಲೆತಿರುಗಿ ಸೊಕ್ಕಿದವನನ್ನು ಎಂದೋ ಕೊಂದೆ ! ಆ ದುರ್ಯೋಧನನನ್ನು ಕೊಲ್ಲಲು ಇನ್ನು ತಡಮಾಡಲಾರೆ." ಭೀಮ ಹಿಂದೆಂದೂ ಧರ್ಮರಾಯನ

ಮೇಲೆ ಇಷ್ಟು ಸಿಟ್ಟಾದವನಲ್ಲ. ಅಡಗಿದ್ದ ಸಂಕಟ ಹಾಗೂ ಕೋಪ ವನ್ನೆಲ್ಲ ಒಮ್ಮೆಗೆ ಕಾರಿದಾನೆ. ಧರ್ಮರಾಯ ಧರ್ಮಪರಾಯಣನಾಗಿ ಸಂಧಿಗೇನಾದರೂ ಒಡಂಬಟ್ಟನೆಂದು ಯೋಚಿಸಿಕೊಂಡು ಭೀಮಸೇನ ಈ ರೀತಿ ನುಡಿದಿದಾನೆ. ಧರ್ಮರಾಯನೊಬ್ಬನನ್ನೇ ಒಂದು ಪಕ್ಷನಾಗಿಸಿ ಉಳಿದವರೆಲ್ಲ ಇನ್ನೊಂದು ಪಕ್ಷವೆಂದು ಧೈರ್ಯವಾಗಿ ನುಡಿದಿದಾನೆ. ಧರ್ಮರಾಯನ ನಡತೆ ತನ್ನಲ್ಲಿ ಯಾವ ಸಂಬಂಧವಿಲ್ಲವೆಂದು ಸಾರಿ ದ್ದಾನೆ. ಅನೇಕಬಾರಿ ಅಣ್ಣನೆಂಬ ಗೌರವಕ್ಕಾಗಿ ಆತನ ಮಾತಿಗೆ ಮನವಿಲ್ಲದ ಮನಸ್ಸಿನಲ್ಲಿ ಕಟ್ಟುಬಿದ್ದಿರುವುದನ್ನು ಸ್ಪಷ್ಟಪಡಿಸಿದಾನೆ; ಆದರೆ ಇನ್ನು ಮುಂದೆ ವೃಥಾ ರಾಜಕಾರ್ಯಕ್ಕೆ ಕೈಹಾಕಬೇಕೆಂದು ಎಚ್ಚ ರಿಕೆ ಕೊಟ್ಟಿದಾನೆ. ಒಂದುಪಕ್ಷ ಆತನಂತೆಸಗಿದರೆ ಅವನ ಮಾತಿಗೆ ತಾನು ಎಳ್ಳಷ್ಟೂ ಕಿವಿಗೊಡುವುದಿಲ್ಲವೆಂದು ಮುಂಗಡವಾಗಿ ನುಡಿದಿದಾನೆ. ಮಹಾ ಪುರುಷರ ಹಣೇಬರಹವೆಲ್ಲ ಇಷ್ಟೆ. ತತ್ವಕ್ಕಾಗಿ ಧೈರ್ಯಕ್ಕಾಗಿ ಸತ್ಯ ಕ್ಕಾಗಿ ಧರ್ಮಕ್ಕಾಗಿ ಒಟ್ಟನಲ್ಲಿ ಲೋಕಕಲ್ಯಾಣಕ್ಕಾಗಿ ಆದರ್ಶವ್ಯಕ್ತಿ ಗಳಾಗಿ ಮಹಾಪುರುಷರೇನೋ ಬಾಳಬಹುದು. ಲೋಕ ಅವರನ್ನು ಕೆಲವು ವೇಳೆ ಮೆಚ್ಚಬಹುದು; ಆಚಂದ್ರಾರ್ಕವಾಗಿ ಅವರ ಕೀರ್ತಿ ಬೆಳ ಗಲೂ ಬಹುದು. ಆದರೆ ಎಷ್ಟೋ ವೇಳೆ ತನ್ನವರ ಬಿರುನುಡಿಗೆ ಪ್ರತಿ ಯೊಬ್ಬ ಮಹಾಪುರುಷನೂ ಗುರಿಯಾಗಬೇಕಾಗುವುದು. ಲೋಕಕಲ್ಯಾ ಣಕ್ಕಾಗಿ ತನ್ನನ್ನೂ ತನ್ನವರನ್ನೂ ಮಹಾತ್ಮರು ಮರೆಯುತ್ತಾರೆ. ಲೌಕಿಕಕ್ಕಿಂತ ಪಾರಮಾರ್ಥಿಕಕ್ಕೆ ಹೆಚ್ಚು ಗಮನ ಕೊಯತ್ತಾರೆ. ಲೋಕ ದೊಡನೆ ಉದಾರಿಯಾಗಿ, ದಯಾದಾಕ್ಷಿಣ್ಯದಿಂದ ಆ ಮಹಾತ್ಮರು ನಡ ಕೊಂಡರೂ ತನ್ನವರೊಡನೆ ನಿಷ್ಠುರದಿಂದ ನಿರ್ದಾಕ್ಷಿಣ್ಯದಿಂದ ನಡೆಯು ವುದು ಅವರಿಗೆ ತಪ್ಪುವಂತಿಲ್ಲ. ಆದರಿಂದ ಆತನ ಮಡದಿ ಹಾಗು ಬಂಧು ಬಳಗ ಮಹಾತ್ಮನಿಗೆ "ಮನೆಗೆ ಮಾರಿ ಪರರಿಗುಪಕಾರಿ" ಎಂಬ ಬಿರು ದನ್ನೂ ದಯಪಾಲಿಸುತ್ತಾರೆ. ಮಹಾತ್ಮಗಾಂಧಿಯವರನ್ನು ಕೊಲೆಗೈದ ವನು ಬೇರೆಯವನಲ್ಲ. ಭರತಖಂಡದ ಸತ್ಪುತ್ರನ ಕೈಲಿ ಮಹಾತ್ಮ ಗಾಂಧಿ ಸಾಯಬೇಕಾಯಿತು !

ಧರ್ಮರಾಯನ ಅಭಿಪ್ರಾಯಕ್ಕಾಗಿಯೂ ಭೀಮ ಕಾಯಲಿಲ್ಲ. ನೇರವಾಗಿ ಕುರುಭೂಮಿಗೆ ನುಗ್ಗಿ ದುರ್ಯೋಧನನಿಗಾಗಿ ಅಲೆಯುವನು. "ಕುರುಧರೆಯೊಳ್ ಕುರುಪತಿಯನರಸಿದಂ ಪವನಸುತಂ" ಎಂದು ಧ್ವನಿ ಪೂರ್ವಕ ರನ್ನಮಹಾಕವಿ ನುಡಿದಿದಾನೆ. ಕುರುಕ್ಷೇತ್ರದಲ್ಲಿ ಎಳ್ಳಷ್ಟು ಜಾಗವನ್ನು ಬಿಡದೆ ಹುಡುಕಿದರೂ ಸುಯೋಧನನ ಸುಳಿವು ಸಿಗಲಿಲ್ಲ. ಬೇಡಲ್ಲಾದರೂ ಇದ್ದಾನೆಂದುಕೊಂಡು ತಕ್ಷಣ ಅತ್ತ ಪವನಸುತ ಧಾವಿಸಿ " ಅರಗಿನ ಮನೆಯಲ್ಲಿ ನಮ್ಮನ್ನೆಲ್ಲ ಸುಡಲು ಪ್ರಯತ್ನಿಸಿದ ಪನ್ನಗಕೇತನನೆಲ್ಲಿ ? ವಿಷಾನ್ನದಿಂದ ಮಾರುತಿಯನ್ನು ಕೊಲ್ಲಲು ಹೊಂಚಿದ ಅಹಿಕೇತನನೆತ್ತ ಹೋದ ? ಜೂಜಾಟದಲ್ಲಿ ನಮ್ಮನ್ನು ಸೋಲಿಸಿ ದ್ರೌಪದಿಯನ್ನು ಎಳೆದಾಡಿಸಿ ಬಡಿಸಿದ ದುರ್ಯೋಧನನೆಲ್ಲಿ ಹೊಕ್ಕಿದಾನೆ ? ಕೃತಕವಾದ ಸಭೆಗೆ ನಮ್ಮನ್ನಾಹ್ವಾನಿಸಿದ ಕೌರವೇಶ್ವರ ನೆಲ್ಲಿ ಅಡಗಿರುವನು ? ಭರತಕುಲಕ್ಕೆ ಕಲಂಕಪ್ರಾಯನಾದವನೆತ್ತಹೋದ? ಭರತವಂಶದ ರಾಜಭವನದಲ್ಲಿ ರಾಜಕಸ್ತ್ರೋತವಾಗಿ ಬಾಳಿದ ಕುರುರಾಜ ನೆಲ್ಲಿ ? ಕುರುಕುಲಬಲಯಮಕೇತುವಾದ ಭೀಮಸೇನ ಬಂದಿದಾನೆ ! " ಸಿಂಹ ದಂತೆ ಗರ್ಜಿಸಿ ಕುರುರಾಜನರಮನೆಯ ದ್ವಾರಕ್ಕೆ ಬಂದು ನಿಂತಾಗ " ಕೌರವ್ಯರಂ ತಿಂದ ರಕ್ಕಸನೋ ಈತನೊ ಭೀಮಸೇನನೆನುತುಂ ಗಾಂಧಾರಿ ಬಸ್ಕುತ್ತೆ ಬೆಕ್ಕಸಮುತ್ತಳ್ ಬರೆ ಕಂಡು ಪಾಂಡವಬಲ ಪ್ರಾಕಾರನಾಕಾರಮಂ ! "

ಎನ್ನಾತ್ಮಜರಂ ನೂರ್ವರು
ಮಂ ನುಂಗಿದ ತೆರದೆ ನುಂಗೆ ಬಂದಂ ಭರದಿಂ ।
ಪನ್ನಗಕೇತನನುಮನಿಂ
ತನ್ನೆಯಮಾಯ್ತೆಂದು ಪಿರಿದುಮುಮ್ಮಳಿಸುತ್ತುಂ ॥

ಕೌರವರನ್ನೆಲ್ಲ ತಿಂದ ರಕ್ಕಸ ಈ ಭೀಮಸೇನ ಎಂದುಕೊಂಡು ಗಾಂಧಾರಿ ಬಳುಕಿದಳಂತೆ. ಪಾಂಡವಬಲಕ್ಕೆ ಸುತ್ತುಗೋಂಟೆಯಾದ ಭೀಮನಾಕಾರವನ್ನು ಕಂಡು "ನನ್ನ ಮಕ್ಕಳನ್ನು, ಅದರಲ್ಲೂ ನೂರುಜನ ರನ್ನು ಕೊಂದು ತಿಂದಹಾಗೆ ಪನ್ನಗಕೇತನನ್ನೂ ತಿಂದು ತೇಗಲು ಈ

ರಕ್ಕಸ ಬಂದನಲ್ಲ ! ಎಂಥ ಅನ್ಯಾಯ ! '' ಎಂದು ಬಹುವಾಗಿ ಕಳವಳ ಗೊಂಡಳು. ಭೀಮನ ಆಟೋಪವನ್ನೂ ಗಾಂಧಾರಿಯ ಕಳವಳ ವನ್ನೂ ರನ್ನ ಒಂದೆರಡು ಮಾತಿನಲ್ಲಿ ತಿಳಿಸಿದ್ದರೂ ಎರಡು ಚಿತ್ರಗಳು ಕಣ್ಣಿಗೆ ಕಟ್ಟುವಂತೆ ನಿರೂಪಿಸಿದಾನೆ. ಭೀಮನ ವ್ಯಕ್ತಿತ್ವ ಹಾಗು ತನ್ನ ವರಿಗಾಗಿ ಅವನೆಸಗಿದ ಮಹತ್ಕಾರ್ಯಗಳನೆಲ್ಲ "ಪಾಂಡವಬಲಪ್ರಾಕಾರ ನಾಕಾರವಮಂ" ಎಂದು ಕಲಾಯುಕ್ತವಾಣಿ ನುಡಿದಿದಾನೆ.

ಹಿರಿಯರಾದ ಧೃತರಾಷ್ಟ್ರ ಗಾಂಧಾರಿಯರ ಸಮ್ಮುಖದಲ್ಲಿ ಭೀಮ ಸೇನ ನಿಂತಿದಾನೆ. ಹಿರಿಯರಿಗೆ ಎಸಗಬೇಕಾದ ಉಪಚಾರವನ್ನೂ ಎಸಗಿಲ್ಲ. ಹೋಗಲಿ ನಮ್ರನಾಗಿದ್ದು ಹಿಂದಿರುಗಿದನೇ ಅದೂ ಇಲ್ಲ.

ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ ಕೊಂದೆಂ ಭವ
ತ್ಸುತರಂ ನೂರ್ವರುಮಂ ಗದಾಪ್ರಹತಿಯಿಂ ದುಶ್ಶಾಸನೋರಃಸ್ಥಳ |
ಕ್ಷತಜಾಸೃಗ್ಜಲಸೇಕದಿಂ ತಣಿಪಿದೆಂ ಕೋಪಾಗ್ನಿಯಂ ಬಂದೆನು
ದ್ಧತನಂ ಕೋಪಕೃತಾಪರಾಧಶತನಂ ನುಂಗಲ್ಕೆ ಪಿಂಗಾಕ್ಷನಂ ||

"ಧೃತರಾಷ್ಟ್ರ ಮಹಾರಾಜನೇ ಕೇಳು, ಜನನಿ ಗಾಂಧಾರಿ ನೀನು ಕೇಳು, ನಿನ್ನ ಮಕ್ಕಳನ್ನು, ನೂರುಜನರನ್ನು ಗದೆಯಿಂದಲೇ ಕೊಂದೆ ! ದುಶ್ಶಾಸನನ ಎದೆಯ ನೆತ್ತರನ್ನೆಲ್ಲ ಕುಡಿದು ನನ್ನ ಕೋಪಾನಲವನ್ನು ತಣಿಸಿದ್ದೇನೆ ! ನನ್ನ ಮೇಲೆ ಕೋಪಗೊಂಡು ನೂರಾರು ಅಪರಾಧವೆಸಗಿ ರುವ ಉದ್ಧತನಾದ ಪಿಂಗಾಕ್ಷನನ್ನೂ ನುಂಗಲು ಬಂದಿದ್ದೇನೆ !'' ಈ ಮಾತನ್ನು ಕೇಳಿ ಗಾಂಧಾರಿ ಅಂಜಿ ಭೀಮನಿಗೆ ಕೈಮುಗಿದು,

ಅನಿಬರ್ ತನಯರ ದುಃಖಮ
ನನುಭವಿಸಿಯುಮಣಮೆ ಪೋಗವೆಮ್ಮಸುಗಳ್ ನೀ |
ನಿಸ್ಸಿತನೆಮಗೊಳ್ಳಿಕೆಯ್ ಭೀ
ಮ ನುಂಗು ಮುನ್ನೆಮ್ಮನೆಮ್ಮಸುತನಂ ಬಳಿಯಂ ||

"ಎಲ್ಲ ಮಕ್ಕಳ ಸಾವನ್ನೂ ಕಂಡೆವು; ಅದರಿಂದಾಗಿ ನೊಂದೆವು; ಇಷ್ಟಾದರೂ ನಮ್ಮ ಪ್ರಾಣಹೋಗದೆ ಉಳಿದಿದೆ; ಅಪ್ಪ ಭೀಮ ನಮ

ಗೊಂದು ಉಪಕಾರವನ್ನೆಸಗು. ಮೊದಲು ನಮ್ಮಿಬ್ಬರನ್ನೂ ತಿಂದುಬಿಡು; ಬೇಕಾದರೆ ಅನಂತರ ದುರ್ಯೋಧನನ ತಂಟೆಗೆ ಹೋಗು" ಎಂದು ಅಂಗಲಾಚಿದಳು. ಈ ಸಂದರ್ಭದಲ್ಲಿ ಭೀಮಸೇನ ನಡೆಕೊಂಡ ರೀತಿ ಸಹೃದಯರಿಗೆ ಬೇಸರವುಂಟುಮಾಡುತ್ತದೆ. ನೂರುಜನಮಕ್ಕಳ ಸಾವಿಗಾಗಿ ಮೊದಲೇ ಪರಿತಪಿಸುತ್ತಿದ್ದ ಮಾತಾಪಿತೃಗಳೆಡೆ ಬಂದು ವಾಯುಪುತ್ರ ಈ ರೀತಿ ಗಳಪಬಹುದೆ? ಉಳಿದಿರುವ ದುರ್ಯೋಧನನೊಬ್ಬನನ್ನಾದರೂ ಉಳಿಸಿಕೊಳ್ಳಬೇಕೆಂದು ಹಾತೊರೆಯುತ್ತಿದ್ದ ವೃದ್ಧದಂಪತಿಗಳೆಡೆ ಪಿಂಗಾಕ್ಷನನ್ನೂ ಕೊಲ್ಲದೆ ಬಿಡಲಾರೆ ಎಂದು ಭೀಮಸೇನ ಅಬ್ಬರಿಸಿರುವುದು ಅಸಭ್ಯವಾಗಿ ಕಾಣದಿರದು. ಈ ವೇಳೆಯಲ್ಲಿ "ನಮ್ಮನ್ನು ಮೊದಲು ಕೊಲ್ಲು" ಎಂದು ಗಾಂಧಾರಿ ಅಂಗಲಾಚುವಾಗ ಕಲ್ಲೆದೆಯೂ ಕರಗದಿರಲಾರದು. ಆದರೆ ಭೀಮಸೇನನಿಗೆ ಎಳ್ಳಷ್ಟೂ ಕರುಣೆ ಬರಲಿಲ್ಲ. ಪಾಂಡವಬಲಪ್ರಾಕಾರನಾದ ಭೀಮ ಅಮಾನುಷವಾಗುತ್ತಿರುವುದನ್ನು ಮಹಾಕವಿ ಮನಮುಟ್ಟುವಂತೆ ನಿರೂಪಿಸಿದಾನೆ.

ವೈಶಂಪಾಯನಸರೋವರವೆಡೆ ದುರ್ಯೋಧನನ ಹೆಜ್ಜೆಯನ್ನು ಗುರುತಿಸಿದ ಪಿಂದ್ಯಕನೆಂಬ ಕಿರಾತ ಭೀಮನೆಡೆ ಬಂದು ಕೊಳದಿಂದ ಕುರುರಾಜ ಹೊರಬಂದ ಹೆಜ್ಜೆ ಕಾಣುವುವು, ಆದರೆ ಕೊಳವನ್ನು ಪ್ರವೇಶಿಸಿದ ಕುರುಹು ಮಾತ್ರ ಕಾಣುತ್ತಿಲ್ಲವೆಂದರುಹಿದನು. ಧರ್ಮರಾಯನಿಗೂ ಸುದ್ದಿ ಮುಟ್ಟಿತು. ಕೃಷ್ಣ ಯೋಚಿಸಿ "ಭೀಷ್ಮರು ಬೋಧಿಸಿದ ಜಲಮಂತ್ರದ ಸಹಾಯದಿಂದ ಸುಯೋಧನ ನೀರಲ್ಲಿ ಮುಳುಗಿ ಕಾಲಮಂಚನೆ ಮಾಡುತ್ತಿರುವನು; ನಾಳೆ ಅಶ್ವತ್ಥಾಮ ಕೃಪರೂ ಬಂದು ಸೇರುವರು. ಅಷ್ಟರೊಳಗೆ ಆತನನ್ನು ಕೊಂದರುಂಟು, ಇಲ್ಲದೇ ಹೋದರೆ ಬಳಿಕ ಯಾರೂ ಆತನನ್ನು ಗೆಲಲಾರರು;" ಅದರಿಂದ ಈ ಚಣದಲ್ಲಿ ಪಗೆಯನ್ನು ಹೊರಬರುವಂತೆ ಮಾಡಿ" ಎಂದಾಗ ಎಲ್ಲರೂ ವೈಶಂಪಾಯನದ ಬಳಿಗೆ ಬರುವರು. ಹೆಜ್ಜೆಯನ್ನು ಪರಿಕಿಸಿ ಸುಯೋಧನನವೇ ಎಂದು ನಿಶ್ಚಯಿಸಿ,

ಭರತಜರೊಳ್ ಮುನ್ನಿಲ್ಲದ
ಪರಿಭಾಷೆಯನುಂಟುಮಾಡಿ ಪೆರಗಡಿಯಿಟ್ಟಂ ।

ಕುರುರಾಜನೆಂದು ಲಜ್ಜಾ
ಭರದಿಂದಂ ತಲೆಯನೆರಗಿದಂ ಧರ್ಮಸುತಂ ||

"ಭರತವಂಶದಲ್ಲಿ ಎಷ್ಟೋಜನ ಹುಟ್ಟಿ ಬಾಳಿದರು; ಹಿಂದೆಂದೂ ಇಂಥ ಅಪವಾದಕ್ಕೆ ನಮ್ಮ ವಂಶ ತುತ್ತಾಗಿರಲಿಲ್ಲ! ದುರ್ಯೋಧನ ಹಿಂದುಮುಂದಾಗಿ ನಡೆದು ಭರತವಂಶಕ್ಕೇ ಅಪಮಾನ ತಂದಿದಾನಲ್ಲ" ಎಂದುಕೊಂಡು ಧರ್ಮರಾಯ ನಾಚಿಕೆಯಿಂದ ತಲೆತಗ್ಗಿಸಿದನಂತೆ. ಧರ್ಮರಾಯನ ಪಾತ್ರದ ಹಿರಿಮೆ ಮುಗಿಲು ಮುಟ್ಟಿದೆ. ಸದಾ ವಂಶದ ಹಿರಿಮೆಗಾಗಿ ಬಾಳುವಂತಹ ಮಹಾಮಹಿಮ ಧರ್ಮರಾಯ. ದುರ್ಯೋಧನ ಎಷ್ಟೇ ಅನ್ಯಾಯವೆಸಗಿರಲಿ ಅವನೂ ನಮ್ಮವನೆಂಬ ಅಭಿಮಾನವನ್ನು ಧರ್ಮರಾಯ ಎಂದೂ ಬಿಟ್ಟವನಲ್ಲ. ಚಿತ್ರಾಂಗದ ಸುಯೋಧನನನ್ನು ಸೆರೆಹಿಡಿದು ಎತ್ತಿಕೊಂಡುಹೋದ ಪ್ರಸಂಗವನ್ನು ನೆನೆದರೆ ಧರ್ಮರಾಯನ ಪಾತ್ರದ ಘನತೆ ಮನದಟ್ಟಾಗದಿರದು. ಗಂಡನನ್ನು ಚಿತ್ರಾಂಗದ ಸೆರೆಹಿಡಿದುದರಿಂದ ಕಳವಳಗೊಂಡು ಭಾನುಮತಿ ಧರ್ಮರಾಯನಲ್ಲಿಗೆ ಧಾವಿಸಿ ರೋದಿಸಿದಾಗ,

ಸುರಿಯಲ್ವೇಡಮದರ್ಕೆ ಬಾಷ್ಪಜಳಮಂ ನಿನ್ನಾಣ್ಮನಂ ನಿನ್ನೊಳಿಂ
ದಿರದಾಂ ಕೂಡುವೆನೆಮ್ಮೊಳಾದ ಕಲಹಕ್ಕಂತಾದೊಡಂ ಕೇಳ ನೂ |
ರ್ವರೆ ದಲ್ ಕೌರವರಾಮುಮಯ್ವರೆ ವಲಂ ಮತ್ತೊರ್ವರೊಳ್ ತೊಟ್ಟಸಂ
ಗರರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂರಯ್ವರಾವಲ್ಲರೇ* ||

"ಅಮ್ಮ, ಕಂಬನಿ ಮಿಡಿಯದಿರು; ಇಂದೇ ನಿನ್ನಗಂಡ ನಿನ್ನೊಡನೆ ಮತ್ತೆ ಸೇರುವಂತೆ ಮಾಡುತ್ತೇನೆ; ನಮ್ಮ ಅವರ ಕಲಹದಲ್ಲಿ ಕೌರವರ ನೂರುಜನ, ನಾವು ಐದುಜನ; ಆದರೆ ನಮ್ಮ ಈ ಎರಡು ಗುಂಪಿನಲ್ಲಿ ಯಾರನ್ನಾದರೂ ಒಬ್ಬನನ್ನು ಮಗದೊಬ್ಬ ಕೆಣಕಿದಾಗ ಹಾಗು ನಮ್ಮ ವಂಶದ ಕೀರ್ತಿಯ ಮಾತು ಬಂದಾಗ ನಾನೆಂದರೆ ನೂರೈದುಜನ ಎಂದು ತಿಳಿ!" ಧರ್ಮರಾಯನ ಮಾತು ವೀರೋಚಿತವಾಗಿ ಬಂದಿದೆ. ವಂಶ

---

*ಪಂಪಭಾರತ ಸಂ. ೭, ಪ ೩೬

ಹಿರಿಮೆಯನ್ನು ಎತ್ತಿ ಹಿಡಿಯುವುದರಲ್ಲಿ ಈ ಧರ್ಮಪುತ್ರ ಮೊದಲಿಗನು. ಆದರಿಂದಲೇ ದುರ್ಯೋಧನನ ಈ ಸಂದರ್ಭದ ನಡತೆಯಿಂದಾಗಿ ಭರತಾನ್ವಯಕ್ಕೆ ಕಲಂಕ ಬಂದಿತೆಂದು ಅಪಮಾನಗೊಂಡು ಮಮ್ಮಲಮರುಗಿದಾನೆ.

ಮೀಂಗುಲಿಗವಕ್ಕಿ ಕೊಳನೊಳ್
ಮೀಂಗೆರಗುವ ತೆರದಿನೆರಗಿ ನೋಡಿಲ್ಲಿರ್ದಂ ।
ಸಿಂಗಾಕ್ಷನೆಂದು ಪವನಸು
ತಂಗಿರ್ಪೆಡೆಮೋರ್ಪ ತೆರದಿನೇಂ ಸೊಗಯಿಸಿತೋ ॥

ಮೀಂಗುಲಿ ಹಕ್ಕಿಗಳು ಮೀನನ್ನು ಹಿಡಿಯುತಿರುವಂತೆ ಕೊಳದಲ್ಲಿ ಕೊಕ್ಕಿಟ್ಟಿದ್ದನ್ನು ರನ್ನ ಚಮತ್ಕಾರವಾಗಿ ವರ್ಣಿಸಿದ್ದಾನೆ. ದುರ್ಯೋಧನ ಇಲ್ಲೇ ಅಡಗಿದ್ದಾನೆಂಬುದನ್ನು ತೋರಿಸುವಂತೆ ಇತ್ತಂತೆ ಆ ದೃಶ್ಯ, ಇಡೀ ಪ್ರಕೃತಿಯೇ ಸುಯೋಧನನಿಗೆ ಪ್ರತಿಕೂಲವಾಗಿ ವರ್ತಿಸಿರುವುದೆಂದು ಕರುಣಾಜನಕವಾಗಿ ನುಡಿದಿದಾನೆ. "ಸರೋವರಜಲಮಂ ಮುಂ ತವೆ ಪೀರ್ದು ಪೀರ್ವೆನ ಎಹೃದ್ರಕ್ತಾಂಬುವಂ" ಎಂದು ಅಬ್ಬರಿಸಿ "ಬಾಹುಸ್ಫಾಲನಂಗೆಯ್ದು ದಿಗ್ವಲಯಮಂ ಮಾರ್ದನಿಯಿಟ್ಟವೋಲ್ ಗಜರಿದಂ ಚಾಳುಕ್ಯಕಂಠೀರವಂ' ಎನ್ನುತ್ತಾನೆ ರನ್ನಮಹಾಕವಿ! ಸರೋವರದ ನೀರನ್ನೆಲ್ಲ ಮೊಟ್ಟಮೊದಲು ಕುಡಿದುಬಿಡುತ್ತಾನಂತೆ. ಅನಂತರ ದುರ್ಯೋಧನನ ರಕ್ತವನ್ನೆಲ್ಲ ಹೀರುವನಂತೆ. ಬಕಾಸುರನ ಪಾಲಿನ ಆಹಾರವನ್ನೆಲ್ಲ ತಿಂದು ತೇಗಿ ಅವನನ್ನು ಕೊಂದು ಕೂಗಿದ ಮಹಾಸಾಹಸಿಯಲ್ಲವೇ ಭೀಮಸೇನ! ಸುಯೋಧನನಿಗೆ ಎಚ್ಚರಬರುವಂತೆ ಮೊದಲು ಹರೆಗಳನ್ನು ಬಡಿಸಿ, ಶಂಖಗಳನ್ನೂದಿಸಿ, ಭೇರಿಗಳನ್ನು ತಾಟಿಸಿ ಕಹಳೆಗಳನ್ನೊತ್ತಿಸಿದರೂ ಆತನಿಗೆ ಎಚ್ಚರವಾಗಲಿಲ್ಲ. ಪಂಚಮಹಾಶಬ್ದಗಳನ್ನು ಮಾಡಿಸಿದರೂ ಆ ಮಹಾನುಭಾವ ಹೊರಗೆ ಬರಲಿಲ್ಲ.

ಅಂಕದ ಕಲಿ ಕುರುವಂಶ ಶ
ಶಾಂಕನೆ ದುರ್ಯೋಧನಾಂಕನೆನೆ ನೆಗಳ್ದಯಶಃ ।

ಪಂಕದೊಳಮಿಾ ಸರೋವರ
ಪಂಕದೊಳಂ ನೀನೆ ನಿನ್ನನಿಂತದ್ದುವುದೇ ||

"ಹೆಸರಾಂತು ಮೆರೆದ ಮಹಾಪರಾಕ್ರಮಿ ನೀನು ! ಕುರುಕುಲಕ್ಕೆ ಚಂದ್ರನಂತೆ ಬಾಳಿ ಬದುಕಿ ಬೆಳಗಿದವನಲ್ಲವೆ ! ರಣರಂಗದಲ್ಲಿ ಏಕೈಕ ಶೂರನೆಂದು ಲೋಕ ನಿನ್ನನ್ನು ಕೊಂಡಾಡಿ ದುರ್ಯೋಧನನೆಂದು ಕರೆಯಲಿಲ್ಲವೆ ! ಅಪಕೀರ್ತಿಯ ಕೆಸರಲ್ಲೂ ನಿನ್ನನ್ನು ನೀನೆ ಅದ್ದಿಕೊಂಡೆಯಾ !" "ನಿನ್ನೊಡನೆ ಹೋರಾಡಲು ಭೀಮನೇಕೆ ನಾನೇ ಸಾಕು; ಹೊರಗೆ ಬಾ; ನನ್ನ ಕೊಂತದ ರುಚಿ ನೋಡುವೆಯಂತೆ." ನಕುಲ ಇಂತು ಅಬ್ಬರಿಸಿದಾನೆ. ಸಹದೇವ ಮುಂದೆ ಬಂದು "ನನ್ನ ಬಾಳ ಸವಿಯನ್ನು ಸವಿದು ಅನಂತರ ಆಯಾಸವನ್ನು ನೀಗಲು ನೀರು ಕುಡಿಯುವಂತೆ" ಎಂದು ದುರ್ಯೋಧನನನ್ನು ಮೂದಲಿಸಿ ಕರೆಯುತ್ತಾನೆ. ಪನ್ನಗಕೇತನನಿದಿರು ಈ ಪಾಪಚ್ಚಿಗಳೂ ಹರಟುವಂತಾಯಿತು ! ಸರಿ ಅರ್ಜುನನೂ ಸುಮ್ಮನೆ ಹೇಗಿದ್ದಾನು; "ಮಾನಧನ ಎನಿಸಿ ನಿನ್ನ ಅಭಿಮಾನವನ್ನು ಹಾಳುಮಾಡಿಕೊಂಡೆ ! ನೀರಲ್ಲಿ ಏಡಿಗಳಿರುವುವು, ಮೀನುಗಳಿರಬಹುದು, ಕಪ್ಪೆಯಿದ್ದರೂ ಸಹಜವೆನ್ನಬಹುದು, ಆದರೆ ಸುಯೋಧನ ! ನಿಜವಾದ ಗಂಡು ಇಂತು ಮುಳುಗಿ ತಲೆಮರೆಸಿಕೊಳ್ಳುತ್ತಾನೆಯೆ ? "; "ಭೀಮನೊಡನೆ ನೀನು ಹೋರಾಡಲಾರೆ; ಹೋಗಲಿ ನನ್ನಮೇಲೆ ಹೋರಾಡು; ನನ್ನ ಅಮೋಘ ಬಾಣಗಳ ಸವಿನೋಡುವೆಯಂತೆ, ಬಾ, " ಅತಿ ಸಾಹಸವಂತನಾದ ಅರ್ಜುನ ಅಟ್ಟಹಾಸದಿಂದ ಕೂಗಿದಾನೆ.

ಧರ್ಮರಾಯ ಹಿಂದಾದುದನ್ನೆಲ್ಲ ಮರೆತು ನಿರ್ಮಲವಾದ ಕ್ಷತ್ರಧರ್ಮವನ್ನು ಮಾತ್ರ ನೆನೆದು:—

ಭರತಾನ್ವಯದೊಳಂದಿನಿಂದಿನೆಡೆಯೊಳ್ ಸಾಪತ್ನ್ಯದೊಳ್ ಬದ್ಧಮ
ತ್ಸರಮಿಲ್ಲೆಮ್ಮನಕಾರಣಂ ಕದಡಿದಯ್ ಸಾವೆಯ್ದಿದಯ್ ನಷ್ಟಸೋ |
ದರಮಾಯಿತ್ತೆನಗಂ ಸ್ವಗೋತ್ರವಧೆಯುಪ್ಪಾ ಪಾತಕಂ ಕೌರವೇ
ಶ್ವರ ನೀಂ ಸಂಧಿಗೊಡಂಬಡಿಂತು ಕೊಳನಂ ಪೊಕ್ಕಿರ್ಪುದೇಂ ತಕ್ಕುದೇ ||

"ಭರತವಂಶದಲ್ಲಿ ಹಿಂದೆಂದೂ ತಮ್ಮ ತಮ್ಮಲ್ಲೇ ಕಾದಾಟ ನಡೆದಿರಲಿಲ್ಲ. ಅಕಾರಣವಾಗಿ ನಮ್ಮ ಶಾಂತಿಯನ್ನೂ ಕದಡಿದೆ; ನೀನೂ ಸಾಯುವಂತಾದೆ; ತಮ್ಮಂದಿರುನ್ನೆಲ್ಲ ಕಳೆಕೊಂಡೆ; ನನಗೂ ಸೋದರರನ್ನು ಕೊಂದ ಪಾಪ ತಲೆಗಂಟ್ಟಿತು; ಹಿಂದಾದುದನ್ನು ಈಗಲಾದರೂ ಮರೆಯೋಣ; ಏಳು" ಕೊಳದಲ್ಲಿ ನಿನ್ನಂಥವನು ತಲೆಮರೆಸಿಕೊಳ್ಳಬಾರದು; ಸಂಧಿಗೊಡಂಬಡು, ಈಗಲೂ ಒಪ್ಪುತ್ತೇನೆ." ಸುಯೋಧನನನ್ನು ಹೃತ್ಪೂರ್ವಕವಾಗಿ ಸಂಧಿಗೆ ಕರೆದಿದಾನೆ: ಧರ್ಮರಾಯನಿಗೂ ಅವನ ತಮ್ಮಂದಿರಿಗೂ ಅಬ್ಬ ಎಷ್ಟು ಅಂತರ! ನೆಲಕ್ಕೆ ಬಿದ್ದ ಮಹಾವೀರನನ್ನು ಅವರೆಲ್ಲಿ ಒಂದಾಗಿ ಹಿಯಾಳಿಸಿದರೆ ಧರ್ಮರಾಯನ ಬಾಯುಲ್ಲಿ ಒಂದಾದರೂ ಕೆಟ್ಟ ಮಾತು ಬಂದಿದೆಯೆ ಧರ್ಮರಾಯ ಎಂದೆಂದಿಗೂ ಧರ್ಮರಾಯನೆ! "ನಿರ್ಮಲಚಿತ್ತಂ ಧರ್ಮಪುತ್ರಂ" ಎಂಬುದಾಗಿ ಕನ್ನಡದ ಆದಿಕವಿ ನುಡಿದಿರುವುದು ಯಥಾರ್ಥವಾದುದು!

ಇಷ್ಟಾದರೂ ಸುಯೋಧನ ಎಚ್ಚರಗೊಳ್ಳಲಿಲ್ಲ. ಭೀಮನಿಗೆ ಎಳ್ಳಷ್ಟೂ ಸಹನೆಯಿಲ್ಲ; "ಈ ಬೂತು ಎನ್ನ ಸರಂಗೇಳ್ದೊಡಲ್ಲದೆ ಪೊರಮಡುವನಲ್ಲಂ, ಇವಂಗಾನೆ ಬಲ್ಲೆಂ" ಎಂದು ಭೀಮಸೇನನುದ್ದಾಮ ಕೋಪಾಟೋಪವಿರಚಿತ ಬದ್ಧ ಭ್ರುಕುಟಿಯಾಗಿ,

ಭವದನುಜನರುಣಜಲಮಂ
ಸವಿನೋಡಿದೆನಿಂತು ನಿನ್ನ ಬಲಜಲಸಿಧಿಯಂ ।
ಸವಿನೋಡಿದೆನೀ ಕೊಳನಂ
ತವೆ ಪೀರ್ದು ಬಳಿಕ್ಕೆ ನಿನ್ನ ಸವಿಯಂ ನೋೞ್ಪೆಂ ॥

"ಈ ಭೂತ ನನ್ನ ದನಿಗೇಳಿದ ಹೊರತು ಹೊರಬರುವಂತಿಲ್ಲ; ಇವನನ್ನು ಹೊರಡಿಸುವ ವಿಧಾನ ನನಗೆ ಗೊತ್ತಿದೆ" ಎಂದು ಭೀಮಸೇನ ಕೋಪೋದ್ರೇಕದಿಂದ ಹುಬ್ಬು ಗಂಟಿಕ್ಕಿ "ಎಲೋ, ನಿನ್ನ ತಮ್ಮನ ರಕ್ತವನ್ನು ಪೀರ್ದು ರುಚಿನೋಡಿದೇನೆ. ನಿನ್ನ ಪರಾಕ್ರಮ ಎಂತಹವೆಂಬುದನ್ನೂ ಈಗ ಅರಿತೆ; ಮೊದಲು ಈ ಕೊಳವನ್ನು ಬಸಿದು ಅನಂತರ ನಿನ್ನ ರುಚಿಯನ್ನೂ ನೋಡುವೆನು"

"ಸಮರಾಕರಮಂ ಬಿಸುಟ್ಟುಕಮಲಾಕರಮಂ ಪೊಕ್ಕುಎಲವೋ ಮರುಳೆ ಬರ್ದುಂಕಲ್ ಬಗೆವಾ ?" "ದುರ್ಯೋಧನವೆಸರ್ಗಿದು ಲಜ್ಜಾಕರಂ ! ತೋರಿದಯ್ ನಿನ್ನಳವಂ ! ಸತ್ತರೇಂ ಪುಟ್ಟರೆ ! ಪೊರಮಡು ! ನೀಂ ಕಯ್ದುಗೊಳ್ ! ಕೌರವಾಚಳ ವಜ್ರಂ ಬಂದನೀತನ್ ಕುರುಕುಲಮಥ ನೋದ್ಭೀಕರಂ ಭೀಮಸೇನಂ !" ಕೊಳಗುಳವನ್ನು ತೊರೆದು ಕೊಳದಲ್ಲಿ ಅಡಗಿದೆಯೇನೋ ! ಇಂತೆಸಗಿ ಬದುಕುವೆನೆಂದು ಬಗೆದೆಯೇನೋ ? ದುರ್ಯೋಧನ ಎಂಬ ಹೆಸರಿಗೆ ಲಜ್ಜೆಯನ್ನುಂಟುಮಾಡಿದೆಯಲ್ಲಾ ! ನಿನ್ನ ಶೌರ್ಯವನ್ನು ನೀನೆ ತೋರಿಸಿಕೊಟ್ಟೆ ! ಸತ್ತರೆ ಮತ್ತೆ ಹುಟ್ಟುವುದಿಲ್ಲವೆ ! ಹೊರಗೆ ಬಾ ! ಶಕ್ತಿಯನ್ನು ಹಿಡಿದು ಬಾ ಕೌರವನೆಂಬ ಪರ್ವತಕ್ಕೆ ವಜ್ರಾಯುಧವಾದ ಭೀಮಸೇನ ಬಂದಿದಾನೆ ! ಕುರುಕುಲವನ್ನೇ ಕಡೆದು ಭೀಕರನಾದ ಭೀಮಸೇನನನ್ನು ನೋಡುವೆಯಂತೆ ಬಾ !"

ಹರಿ ಸಂಧಾನಕ್ಕೆ ವಂದಂದವಗಡಿಸಿದಹಂಕಾರ ಮೆಲ್ಲಿತ್ತೊ, ಕೃಷ್ಣಾಂ
ಬರ ಕೇಶಾಕೃಷ್ಟಿಯಂ ಮಾಡಿಸಿದ ಮದಮದೆಲ್ಲಿತ್ತೊ ಕೌಂತೇಯರಂ ಮು
ಚ್ಚರದಿಂ ಕಾಂತಾರದೊಳ್ ತಿರ್ರನೆ ತಿರಿಪಿದ ಸೊಕ್ಕೆಂಗೆವೋದುದೆಂದಾ
ಕುರುವಂಶಾಧೀಶನಂ ಮೂದಲಿಸಿದನದಟಂ ಭೀಮನುದ್ದಾಮಭೀಮಂ ||

"ಕೃಷ್ಣ ಸಂಧಿಯೆಸಗಲು ಬಂದಾಗ ನೀನು ತೋರಿದ ಅಹಂಕಾರ ಎಲ್ಲಿ ಹೋಯಿತೋ ! ದ್ರೌಪದಿಯ ತಲೆಗೂದಲನ್ನು ಹಿಡಿದು ಎಳೆದಾಡಿಸಿದ ಮದ ಎಲ್ಲಿ ಅಡಗಿತೋ ! ಕೌಂತೇಯರನ್ನು ಹೊಟ್ಟೆಕಿಚ್ಚಿನಿಂದ ಕಾಡಿನಲ್ಲಿ ತಿರ್ರನೆ ತಿರುಗುವಂತೆ ಮಾಡಿದಾಗಿನ ಸೊಕ್ಕು ಈಗೆಲ್ಲಿ ಹೋಯಿತು!" ಎಂದು ಕುರುವಂಶಾಧೀಶನನ್ನು ಮಹಾಪರಾಕ್ರಮಿಯಾದ ಭೀಮ ಮೂದಲಿಸಿದ್ದಾನೆ.

ಒಡೆಯಲಜಾಂಡಂ ಕುಲಗಿರಿ
ಕೆಡೆಯಲ್ ಪಿಳಿಯಲ್ಕೆ ಧಾತ್ರಿ ದಿವಿಜರ್ ನಡುಗ ।
ಲ್ಕೊಡರಿಸುವಿನಂ ಜಟಾಸುರ
ಹಿಡಿಂಬ ಬಕವೈರಿ ಸಿಂಹಸನಾದಂಗೆಯ್ದಂ ! ||

"ಜಟಾಸುರ ಹಿಡಿಂಬ ಬಕರನ್ನು ಕೊಂದ ಭೀಮಸೇನ ಸಿಂಹನಾದ ವೆಸಗಿದಾಗ ಬ್ರಹ್ಮಾಂಡ ಬಿರಿಯಿತು; ಕುಲಪರ್ವತ ನೆಲಕ್ಕುರುಳಿತು; ಭೂಮಿ ಬಕ್ಕನೆ ಬಾಯಿಬಿಟ್ಟಿತು;"

ಅಳುರ್ದು ಕೊಳೆ ಭೀಮಕೋಪಾ
ನಳನೆಸರ್ನೊಯ್ದುಟ್ಟಿ ಜಲದನ್ರೋಲ್ ಮರುಗಿದುದಾ ।
ಕೊಳದ ಜಲಮೊಯ್ದು ಕಾಯ್ದು ಪ
ರೊಳೆ ಕೂಳ್ ಕುದಿವಂತೆ ಕುದಿದುವನಿಮಿಷತತಿಗಳ್ ॥

"ಭೀಮನ ಕೋಪಜ್ವಾಲೆ ಎತ್ತೆತ್ತಲೂ ವ್ಯಾಪಿಸಿತು; ಸರೋವರದ ನೀರೆಲ್ಲ ಕಾದು ಕುದಿಯಿತು. ಕಾದ ಎಸರಿನಲ್ಲಿ ಕುದಿವ ಅನ್ನದಂತೆ ಮೀನುಗಳು ಕುಡಿದು ಹೋದುವು"— ಸನ್ನಿವೇಶ ಕಣ್ಣಿಗೆ ಕಟ್ಟುವಂತೆ ಮಹಾಕವಿ ವಿವರಿಸಿದಾನೆ. ರನ್ನನ ಕೈಗೆ ಬಂದ ಮಾತು ಒಂದೆ ಗಾಂಡೀವಿಯ ಕೈಗೆ ಸಿಕ್ಕಿದ ಬಾಣವೂ ಒಂದೆ. ಇವರಿಬ್ಬರ ಕೈಚಳಕ ಅಪೂರ್ವವಾದುದು, ಅಲೌಕಿಕವಾದುದು ! ಪ್ರಕ್ಷುಬ್ಧಗೊಂಡ ಭೀಮಸೇನನ ಭೀಕರಾಕಾರಕ್ಕೆ ರನ್ನಮಹಾಕವಿ ಕಲಾಪೂರ್ಣವಾದ ಸ್ವರೂಪವನ್ನಿತ್ತಿದಾನೆ !

ಅಂತು ಭೀಮನ ಸಿಂಹನಾದದ ಅನಾಂತರದಿಂದ ಜಲಚರ ಜೀವ ರಾಶಿಗಳೆಲ್ಲ ಬೆಚ್ಚಿ ಬೆದರಿದವು; ಗೋಳಾಡಿದವು; ಕುತ ಕುತಕುದಿದವು;

ಆ ರವಮುಂ ನಿರ್ಜಿತಕಂ
ಕಂಠೀರವರವಮುಂ ನಿರಸ್ತಘನರವಮುಂ ಕೋ ।
ಪಾರುಣನೇತ್ರಂ ಕೇಳ್ದಾ
ನೀರೊಳಗಿರ್ದುಂ ಬೆಮರ್ತನುರಗಪತಾಕಂ ॥

"ಭೀಮನ ಅಬ್ಬರ ಸಿಂಹನಾದದಂತಿತ್ತು; ವೋಡ ವೊಳಗಿದಂತಿತ್ತು. ದುರ್ಯೋಧನನಿಗೆ ಕೋಪವುಕ್ಕಿ ಕಣ್ಣು ಕೆಂಪಾಗಿ ನೀರಲ್ಲಿದ್ದೂ ಬೆವರಿದನು"—ಮಹಾಕವಿಯ ಅಪೂರ್ವವಾದ ಕಲಾಸಿರಿಯನ್ನು ಇಲ್ಲಿ ಯಾರು

ಈ ಶಬ್ದವನ್ನು ಕೇಳಿ ಬೇಕಾದರೂ ನೋಡಬಹುದು. ಇಲ್ಲಿನ ಪ್ರತಿಯೊಂದು ಮಾತೂ ಕನ್ನಡಾಂಬೆಯ ಕಂಠೀಹಾರದ ಕೌಸ್ತುಭವೆಂದರೆ ಅತಿಶಯೋಕ್ತಿಯಲ್ಲ. ''ನೀರೊಳಗಿರ್ದುಂ ಬೆಮರ್ತನುರಗಪತಾಕಂ'' ಎಂಬ ವಾಕ್ಯ ಒಂದೇ ಸಾಲದೆ ರನ್ನನನು ಕವಿಚಕ್ರಿಯೆಂದು ಕೊಂಡಾಡಲು ! ಸರಸ್ವತಿಯ ಭಂಡಾರ ಮುದ್ರೆಯನ್ನು ಈ ಮಹಾಕವಿ ಬಿಚ್ಚಿರುವನೆಂಬುದಕ್ಕೆ ಈ ಮಾತೇ ಸಾಕ್ಷಿ ! ''ಫಣಿಪತಿಯ ಫಣಾರತ್ನಮುಮಂ ಪೇಳ್ ಪರೀಕ್ಷಿಸಂಗೆಂಟಿರ್ದೆಯೇ ? '' ಎಂದು ಮಹಾಕವಿ ಸವಾಲು ಹಾಕಿರುವುದು ಸಾರ್ಥಕವಾದುದು, "ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾಮೆ ಪೇಳವೆ'' ಎಂದು ರನ್ನ ಧೈರ್ಯವಾಗಿ ನುಡಿದಿದಾನೆ. ಒರೆಗಲ್ಲಿನಲ್ಲಿ ತಿಕ್ಕಿ ನೋಡಿದಾಗ್ಯು ಈ ಮಹಾಕವಿಯ ಗದಾಯುದ್ಧ ಸರ್ವಾಂಗ ಸುಂದರವಾಗಿ ಸರ್ವಾಲಂಕೃತಭರಿತವಾಗಿ ಕಾವ್ಯಮೇರುವಿನ ಧವಳಶಿಖರವಾಗಿ ಕಂಗೊಳಿಸಿದೆ !

ಸುಯೋಧನ ಬೆವರಿ ಬೇಗುದಿಗೊಂಡು ಜಲಸ್ತಂಭನವನ್ನು ಮರೆತು ಕೋಪೋದ್ರೇಕಗೊಂಡು ''ಉರಗಪತಾಕ ಅಸಹಾಯನಾಗಿ ಕೊಳವನ್ನು ಹೊಕ್ಕಿದಾನೆ" ಎಂದು ನನಗಾಗದವರು ಅಪಹಾಸ್ಯಮಾಡುದಿರುತ್ತಾರೆಯೆ ? ''ಪ್ರಾಣರಕ್ಷಣೆಗಾಗಿ ಕುಲದಲ್ಲಿ ಚಲದಲ್ಲಿ ತ್ಯಾಗದಲ್ಲಿ ಅದ್ವಿತೀಯನಾದ ನಾನು ಮಹಾಪುರುಷರಲ್ಲಿ ಅನುಪಮನಾದ ನಾನು ನನ್ನನ್ನೇ ಕೀಳಾಗಿ ಮಾಡಿಕೊಂಡೇನೆ" ಎಂದು ಚಿಂತಿಸಿ,

ರಸೆಯಿಂ ಕಾಲಾಗ್ನಿ ರುದ್ರಂ ಪೊರಮಡುವೊಲಂತಾ ಸರೋಮಧ್ಯದಿಂ ಸಾ
ಹಸ ಗರ್ವಾಲಂಕೃತಂ ತೊಟ್ಟನೆ ಕೊಳೆ ಪೊರಮಟ್ಟೆಲ್ಲಿದಂ ಭೀಮನೆಂದೆ
ಣ್ದೆಸೆಯಂ ನೋಡುತ್ತೆ ಮತ್ತದ್ಭುತನಟನಿಟಿಲಾಲೋಲ ಕೀಲಾಕ್ಷಿವೊಲ್ ದ
ಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ ||

ಪ್ರಳಯಕಾಲದಲ್ಲಿ ಭೂಮಿಯನ್ನು ಭೇದಿಸಿಕೊಂಡು ಅಗ್ನಿಯನ್ನು ಕಾರುತ್ತ ರುದ್ರ ಮೇಲೆದ್ದು ಬರುವಂತೆ ಸಾಹಸಯುಕ್ತವಾದ ಗರ್ವದಿಂದಲಂಕೃತನಾದ ದುರ್ಯೋಧನ ತಟ್ಟನೆ ಮೇಲೆದ್ದು ಬಂದು ಭೀಮಸೇನನೆಲ್ಲಿ ಎಂದು ಅಬ್ಬರಿಸಿ ಎಂಟು ದಿಕ್ಕನ್ನೂ ಈಕ್ಷಿಸುತ್ತ ತಾಂಡವನರ್ತನಮಾಡುವ

ನಟರಾಜನ ಹಣೆಯಲ್ಲಿ ಜ್ವಾಲೆಯನ್ನುಗುಳುತ್ತಾ ಗಿರ್ರನೆ ತಿರುಗುವ ಹಣೆ ಗಣ್ಣೋ ಎಂಬಂತೆ ಕೋಪದಿಂದ ಕಣ್ಣು ಕೆಂಡವಾಗಿ ಉರಿಯುತ್ತಿರಲು ತನ್ನ ಗದೆಯನ್ನು ದುರ್ಯೋಧನ ತೂಗಿದನು" — ಇದು ಅದ್ಭುತವಾದ ವಿವರಣೆ. ಸನ್ನಿವೇಶಕ್ಕೆ ಒಪ್ಪುವಂತೆ ರುದ್ರರಮಣೀಯವಾದ ಚಿತ್ರ ವನ್ನು ಮಹಾಕವಿ ಸಹೃದಯರ ಮುಂದಿಟ್ಟಿದಾನೆ. ಅಂತ್ಯಕಾಲದ ನೆನ ಪನ್ನು ತರುವಂತಹ ಭಯಾನಕ ರಸಪ್ರವಾಹದಲ್ಲಿ ವಾಚಕವೃಂದವನ್ನು ತೇಲಿಸಿದಾನೆ. ರನ್ನನ ಮಾತುಗಳು ಕೇವಲ ಉತ್ಪ್ರೇಕ್ಷೆಯಲ್ಲ; ಖಂಡಿತವೂ ಖಚಿತವೂ ಅಹುದು. ದುರ್ಯೋಧನ ಸರೋವರದಿಂದೆದ್ದು ಬಂದ್ದೇ ಬಂದ; ಇನ್ನೇನು ದ್ವಾಪರನಿಗೂ ಅಂತ್ಯವೊದಗಿ ಬಂದಿದೆ: ಹೆಚ್ಚೆಂದರೆ ಒಂದೆ ರಡು ಘಳಿಗೆ ಮಾತ್ರ ಉಳಿದಿದೆ ಯುಗಾಂತ್ಯಕ್ಕೆ! ಈ ಯುಗ ಅಂತ್ಯವಾ ಗಲು ರುದ್ರನ ತಾಂಡವನೃತ್ಯ ಬೇಕಿಲ್ಲ: ಕೊಳದಿಂದ ದುರ್ಯೋಧನನೆದ್ದು ಬಂದುದೇ ಸಾಕು! ತನ್ನ ಕ್ಷಾತ್ರ ನೃತ್ಯದ ಕೊನೆಯ ಕುಣಿತವನ್ನು ಕುಣಿದು ಯುಗಾಂತ್ಯಕ್ಕೆ ಅನುಮತಿಯೀಯುತ್ತಾನೆ! ಇದನ್ನು ಮನದಲ್ಲಿಟ್ಟು ಕೊಂಡು ರನ್ನಮಹಾಕವಿ ಈ ಅದ್ಭುತ ಸನ್ನಿವೇಶವನ್ನು ಅಲೌಕಿಕವಾಗಿ ಚಿತ್ರಿಸಿದಂತಿದೆ.

———

## ಎರಳ್ನುಡಿಯುಂ ಫಣಿರಾಜಕೇತನಂ!

ನಿಜಭುಜಗದೆಯನ್ನು ತೂಗಿದ ಚಲದಂಕಮಲ್ಲನ ಸೆರಗಿಲ್ಲದ ಮೆಯ್ಗಲಿತನವನ್ನು ಕಂಡು ಭೀಮಸೇನ ಮೆಚ್ಚಿ ತಲೆ ತೂಗಿದನಂತೆ! ದುರ್ಯೋಧನನ ಬಾಳ್ವೆ ಆಗದವರನ್ನೂ ಮೆಚ್ಚಿಸುವಂತೆ ಮಹಿಮಾನ್ವಿತ ವಾದುದು! ಭೀಮನ ಮೆಚ್ಚಿಗೆ ಬಹುಕಾಲ ವಿರಲಿಲ್ಲ. ಮರುಕ್ಷಣದಲ್ಲೇ ಮೂದಲಿಸಲು ಮನತೆತ್ತು ದುಶ್ಶಾಸನನನ್ನು ಅಮಾನುಷವಾಗಿ ತಾನು ಕೊಂದ ದನ್ನು ಮಾನನಿಧಿಯ ಮುಂದೆ ಗಳಪುವನು, ಮೊದಲೇ ಕೋಪಗೊಂಡಿದ್ದ ಸುಯೋಧನ ಮತ್ತೆ ರೇಗಿ "ದ್ರೌಪದಿಯನ್ನು ಆ ದುಶ್ಶಾಸನನೆ ದರ ದರ ಎಳೆದಾಡಿದಾಗ ನೀನು ಷಂಡನಂತಿದ್ದೆಲ್ಲೋ! ಅಂದು ಈ ಗಂಡಗರ್ವ

ಎಲ್ಲಿಗೆ ಹೋಗಿತ್ತೋ ? ಎಂದೆಂದಿಗೂ ನೀನು ಷಂಡನೆ ! ನಿನ್ನನ್ನು ಯಾರು ಇಂದು ಗಂಡಾಗಿಮಾಡಿದರೋ ? ಭೂಮಿಯನ್ನು ಅಧೋಲೋಕಕ್ಕೆ ರಾಕ್ಷಸರು ಕೊಂಡು ಹೋದಾಗ ವಿಷ್ಣು ವರಹಾವತಾರದಿಂದ ಸಾಗರದಲ್ಲಿಳಿದು ಭೂಮಿಯನ್ನು ತಂದಂತೆ ನಾನೂ ಕೂಡ ಇಂದು ಗೆಲುವನ್ನು ಪಡೆಯುವುದಕ್ಕಾಗಿ ಕೊಳವನ್ನು ಹೊಕ್ಕಿದ್ದೆ; ಅಂತಲ್ಲದೆ ಅಂಜಿಕೆಯಿಂದ ಹೊಕ್ಕವನಲ್ಲ ! " ಸ್ವಾಭಿಮಾನಿ ತನ್ನ ಘನತೆಗೊಪ್ಪುವಂಥ ಹೋಲಿಕೆಯನ್ನಿತ್ತು ಒರಟನಾದ ಭೀಮನನ್ನು ಪ್ರತಿಯಾಗಿ ಮೂದಲಿಸಿದ್ದಾನೆ. ದುಶ್ಶಾಸನನ ಸಾವನ್ನು ನೆನಪಿಗೆ ತಂದುದರಿಂದ ದುರ್ಯೋಧನನ ಕೋಪ ನೂರ್ಮಡಿಸಿದೆ. ಅದರಿಂದ ಹಿಂದೆ ಪಾಂಡವರು ಪಟ್ಟ ಪಾಡನ್ನೆಲ್ಲ ಭೀಮನಿಗೆ ತಾಕುವಂತೆ ಒಂದಾದಮೇಲೊಂದಾಗಿ ನೆನಪಿಗೆ ತರುತ್ತಿದ್ದಾನೆ. ಅರಣ್ಯದಲ್ಲಿ ಅವರು ಅಲೆದಿದ್ದು; ಗೆಡ್ಡೆ ಗೆಣಸುಗಳಿಗಾಗಿ ತಿರುಗಾಡಿದ್ದು, ವಿರಾಟನಗರದಲ್ಲಿ ಭೀಮಸೇನ ಬಾಣಸಿಗನಾಗಿ ಬಾಳಿದ್ದನ್ನೆಲ್ಲಾ ಭಾವೋದ್ರೇಕದಿಂದ ನುಡಿದಿದ್ದಾನೆ. ಈ ಮಾತುಗಳನ್ನು ಕೇಳಿ ಭೀಮಸೇನ "ಕುರುವಂಶಜ ಕೇಳ್ ನಿನ್ನೀ ಶರೀರಮಾಂಸಮೊಳೆ ಮರುಳ್ಗೆ ಬಾಣಸಗೆಯ್ವೆಂ" ಎಂದು ಅಬ್ಬರಿಸುತ್ತಾನೆ. ಹಿಂದೆಲ್ಲ ಪಾಂಡವರನ್ನು ಕೊಲ್ಲಹೋಗಿ ದುರ್ಯೋಧನನೆಸಗಿದ ನಾನಾ ಅನುಚಿತ ಮಾರ್ಗಗಳನ್ನು ಮತ್ತೊಮ್ಮೆ ಆತನ ನೆನಪಿಗೆ ತಂದುಕೊಟ್ಟು "ಪಾಂಡವರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್ ಗತಕಾಲಂ ಲಯಕಾಲವಾಯ್ತು ನಿನಗಿನ್ನೆಂತ್ಯ ಕಾಲಂ ಗಡ ! " ಎಂದು ಮತ್ತೆ ಮತ್ತೆ ಪರಿಹಾಸ್ಯವೆಸಗುತ್ತಾ ಮೂದಲಿಸಿದನು.

ದುರ್ಯೋಧನ ಸಿಟ್ಟಾಗಿ ಪಾಂಡವರನ್ನೆಲ್ಲ ಒಟ್ಟಾಗಿ ನೋಡಿ:—

**ಇರಲಿಂತೀ ಮಾದ್ರಿಪುತ್ರರ್ ಬಡವುಗಳವರೇಗೆಯ್ದಪರ್ ಧರ್ಮಪುತ್ರಂ**
**ಬೆರಸೀಗಳ್ ಬರ್ಕೆ ಭೀಮಂ ಹರಿಸುತ ನೊಡನೀ ಮೂವರುಂ ಬರ್ಕೆ ಮೇಣಾ**
**ಯ್ವರುಮಾ ಬರ್ಕೀ ಕೃತಾಂತಾತ್ಮಜ ಪವನಜ ಗಾಂಡೀವಧನ್ವರ್ಕಳೀ ಮೂ**
**ವರೊಳೊರ್ಬಂ ಬರ್ಕೆ ಕೃಷ್ಣಂತೊಡರ್ದನಿಬರೊಳಂ ಬರ್ಕೆ ಮೇಣ್**
ಬನ್ನಮೀವೆಂ

ನಕುಲ ಸಹದೇವರು ಕೇವಲ ಪಾಪಚ್ಚಿಗಳು ! ಪಾಪ ಅವರೇನು ಹೋರಾಡಿಯಾರು ! ಭೀಮ ಅರ್ಜುನನೊಡನೆ ಧರ್ಮರಾಯನೂ ಸೇರಿ ಮೂವರೂ ನನ್ನೊಡನೆ ಹೋರಾಡಲಿ ! ಅಥವ ಪಂಚಪಾಂಡವರೈವರೂ ಬನ್ನಿ, ಪರವಾಯಿಲ್ಲ ! ಧರ್ಮರಾಯ, ಭೀಮ, ಅರ್ಜುನ ನಿಮ್ಮಲ್ಲಿ ಯಾರಾದರೂ ಒಬ್ಬರು ಬನ್ನಿ ! ಕೃಷ್ಣನನ್ನು ಸೇರಿಸಿಕೊಂಡು ಇಲ್ಲಿರುವವರೆಲ್ಲ ಒಟ್ಟಾಗಿ ಬಂದರೂ ಚಿಂತೆಯಿಲ್ಲ ಎಲ್ಲರನ್ನು ಸವೆ ಬಡಿಯುತ್ತೇನೆ ! ದುರ್ಯೋಧನನ ಅಂತಿಮಕಾಲದ ಸಾಹಸ ಗಗನ ಚುಂಬಿತವಾದುದು ! ಎಲ್ಲರನ್ನು ಒಟ್ಟಿಗೆ ಕದನಕ್ಕೆ ಕರೆಯುತ್ತಿದ್ದಾನೆ ಈ ಕಡುಗಲಿ ! ಎಷ್ಟಾದರೂ ಚಲದಂಕಮಲ್ಲನಲ್ಲವೆ ! ಸಾಹಸಧನನಲ್ಲವೇ ಈ ಕುರುರಾಜ ! ಹುಲಿ ತನ್ನ ಕಾಡಲ್ಲೂ ಅಷ್ಟೆ ಪರರ ಕಾಡಲ್ಲೂ ಅಷ್ಟೆ. ಎಂದಿಗಾದರೂ ಹುಲ್ಲು ತಿಂದೀತೆ ! ಎದುರಿಸುವಾಗ ಒಬ್ಬನಾದರೇನು ಐದು ಜನರಾದರೇನು ! ಎಲ್ಲರೂ ಒಂದೆಡೆಯಲ್ಲಿ ಸಿಕ್ಕುವುದು ಅಪರೂಪವಲ್ಲವೆ ! ಒನ್ನೆಗೆ ಎಲ್ಲ ಸೇಡುಗಳನ್ನು ತೀರಿಸಿಕೊಳ್ಳಲು ಅವಕಾಶ ದೊರೆತಿರುವಾಗ ಹಿಂದು ಮುಂದು ನೋಡಬಹುದೆ ! ಸಾಹಸಧನ ತನ್ನಲ್ಲಿನ ಸಾಹಸವನ್ನೆಲ್ಲ ಒಂದೇ ಬಾರಿ ಹೊರ ಚೆಲ್ಲಿದ್ದಾನೆ.

ಧರ್ಮರಾಯ ಹೋರಾಟವನ್ನು ಎಂದೂ ಬಗೆದವನಲ್ಲ. ಇಂದೂ ಕೂಡ ಸಾಧ್ಯವಾದರೆ ಸಂಧಿಯೊಸಗೋಣ ಎಂದುಕೊಂಡು

ಆಗದು ಸಮರಂ ಗುಣಯುತ
ನಾಗು ಮಹಾಭೋಗಭಾಗಿ ನಿನ್ನಾಳ್ವಮಹೀ ।
ಭಾಗಮುಮಂ ಸಕಲ ಮಹೀ
ಭಾಗಮುಮಂ ನೀನೆಕೊಂಡು ಸುಖಮಿರಲಾಗ ॥

“ಸುಯೋಧನ, ಸಮರವನ್ನು ಬಯಸಬೇಡ ! ಗುಣವಂತನಾಗು ! ರಾಜಭೋಗಗಳೆಲ್ಲ ನಿನ್ನ ಪಾಲಾಗಿರಲಿ ! ನೀನಾಳುವ ಭೂಮಿ ಮತ್ತು ಸಕಲ ಭೂಭಾಗವೂ ನಿನಗೆ ಇರಲಿ ! ಅಂತು ಹೋರಾಟ ಸಾಕು ಇನ್ನಾದರೂ ಸುಖವಾಗಿರು ! ”

ಧರಣೀ ಚಕ್ರಮನೊಪ್ಪುಕೊಳ್ ಬಗೆಯದಿರ್ ವಿದ್ವೇಷಮಂ ನಮ್ಮನ
ಯ್ವರ ನಿನ್ನಾಳ್ವಿಸ ಕಯ್ಸಿಕೊಳ್ ನೆನೆಯದಿರ್ ಕಿಳ್ಪಿಕ್ಕಿನೊಳ್ ತೊಟ್ಟುಕೊಂ
ಡಿರದೆಮ್ಮೆಂಬುದ ನಿಂಬುಕಯ್ ಮನದೊಳ್ಪಿಂ ಶಾಂತಿವಿಶ್ರಾಂತಿ ಸೋ
ದರನೆಂಬಂತುಪಶಾಂತಿಯಂ ಕುರುಕುಲಕ್ಷ್ಮಾಪಾಲ ಚೂಡಾಮಣೀ ||

"ಭೂಗೋಳವನ್ನೊಪ್ಪಿಸಿಕೋ ! ಹಗೆತನವನ್ನು ಮರೆತುಬಿಡು ! ನಮ್ಮೈವರನ್ನೂ ನಿನ್ನ ಸೇವೆಗಿರಿಸಿಕೋ ! ಉದಾರಿಯಾಗಿ ಯೋಚಿಸಿ ನೋಡು ! ನಾವೆಂದುದಕ್ಕೆ ಮನಸಾರೆ ಒಡಂಬಡು ! ಘನತರವಾದ ಶಾಂತಿಸಮಾದಾನವುಳ್ಳ ಸೋದರನಾಗಿ ಉಪಶಾಂತನಾಗಿ ನಾವೆಂದಂತೆ ನಡೆಯಪ್ಪ ಕುರುರಾಜ ! ಧರ್ಮರಾಯ ಲೋಕಕಲ್ಯಾಣಕ್ಕಾಗಿ ಸರ್ವಸ್ವವನ್ನೂ ತೊರೆಯಲು ಸಿದ್ಧನಾಗಿದ್ದಾನೆ. ಒಂದೆರಡು ಮಾತುಗಳಿಂದಲೇ ಧರ್ಮರಾಯನ ವ್ಯಕ್ತಿತ್ವದ ಘನತೆ ಗಗನಕ್ಕೇರುವಂತೆ ರನ್ನಮಹಾಕವಿ ಆತನ ಪಾತ್ರವನ್ನು ರಮಣೀಯವಾಗಿ ಚಿತ್ರಿಸಿದಾನೆ. ಶಾಂತಿಯ ಸಾಕಾರ ಮೂರ್ತಿಯೇ ಧರ್ಮರಾಯ ! ದೇಹಂ ಬಳೆದ ದಯಾದಾಕ್ಷಿಣ್ಯವೇ ಧರ್ಮಸುತನೆಂಬಂತೆ ಆತನ ಪಾತ್ರವನ್ನು ಅಲೌಕಿಕವಾಗಿ ಹಾಗೂ ಕಲಾಯುಕ್ತವಾಗಿ ಮಹಾಕವಿ ಸೃಷ್ಟಿಸಿ ಕೃತಕೃತ್ಯನಾಗಿದಾನೆ !

ಶ್ರೀಕೃಷ್ಣ ಈ ನಡುವೆ ತಲೆಹಾಕಿ ತಾನು ಹಿತ ನುಡಿದಂತೆ ನಟಿಸುವನು. "ದುರ್ಯೋಧನ, ಕೇಳಯ್ಯ, ಧರ್ಮರಾಯ ಒಳ್ಳೇದನ್ನೇ ಹೇಳಿರುವನು; ಆತನ ಮಾತಿಗೊಡಂಬಟ್ಟು ನೀನೇ ರಾಜನಾಗಿ ಬಾಳಿದರೆ ದೋಷವೇನಿದೆ ? " ಸಾಹಸಧನನ ಸ್ವಾಭಿಮಾನ ಕೆರಳುವಂತೆ ಕೃಷ್ಣ ನುಡಿದಿದಾನೆ. ಎಂದಿಗಾದರೂ ಒಪ್ಪಿಯಾನೆ ! ಭೀಮನಿಗಾಗಲೆ ಭಯವಾಯಿತು; ಎಲ್ಲಿ ದುರ್ಯೋಧನ ಅಣ್ಣನ ಮಾತಿನಂತೆ ನಡೆದಾನೋ, ಅವನನ್ನು ಕೊಲ್ಲುವ ಸದವಕಾಶವನ್ನು ತಾನು ಕಳೆದುಕೊಳ್ಳಬೇಕಾಗುವುದೋ ಎಂದು ಕಳವಳಿಸುತ್ತಾನೆ.

ನೀನಯ್ದು ಬಾಡದೊಳ್ ಸಂ
ಧಾನಂ ಮಾಡಲ್ಕೆ ಪೋದೊಡೊಲ್ಲದನಿ ನ್ನೀ|

ಮಾನಧನನೆಯ್ದೆ ನಿಜತನು
ಜಾನುಜರಳ್ಕಾಡೆ ಸಂಧಿಯಂ ಮಾಡುವನೇ ||

"ಕೃಷ್ಣ, ನೀನು ಐದು ಹಾಳೂರನ್ನು ಕೇಳಿದಾಗಲು ಈತ ಸಂಧಿಗೊಡಂಬಡಲಿಲ್ಲ. ತನ್ನ ಮಕ್ಕಳು ಮರಿಗಳನ್ನೆಲ್ಲ ಕಳಕೊಂಡು ಸಹೋದರರನ್ನೆಲ್ಲ ಬಲಿಗೊಟ್ಟು ಈ ಮಾನನಿಧಿ ಹೇಗೆ ಸಂಧಿಗೊಪ್ಪಿಯಾನು!" ಭೀಮಸೇನ ಸುಯೋಧನನನ್ನು ಮಾನನಿಧಿಯೆಂದು ಕೊಂಡಾಡುತ್ತಿಲ್ಲ.

ಕಟಕಿಯಿಂದ ನುಡಿದು ಛಲಗಾರನಾದ ದುರ್ಯೋಧನನನ್ನು ಕೆರಳಿಸಿ ಸಂಧಿ ಕಾರ್ಯ ಹಾಳಾಗುವಂತೆ ಕುತಂತ್ರವೆಸಗಿದಾನೆ. ಭೀಮನ ಸಂಸ್ಕಾರಕ್ಕೂ ಕುತಂತ್ರಕ್ಕೂ ಬಹುದೂರ. ಆದರೂ ಈ ಸಂದರ್ಭದಲ್ಲಿ ಒರಟನಾದ ಭೀಮ ಚಮತ್ಕಾರವಾಗಿ ಮಾತಾಡಿದಾನೆ. ಕೃಷ್ಣಪರಮಾತ್ಮನ ಸಾನ್ನಿಧ್ಯ ಹಾಗು ಸಂಪರ್ಕ ಈತನಿಗೆ ಚಮತ್ಕಾರ ಮತ್ತು ಜಾಣ್ನುಡಿಯನ್ನು ಕಲಿಸಿಕೊಟ್ಟಿರಬಹುದು.

ಸುಯೋಧನ ಎಂದೆಂದಿಗೂ ಸುಯೋಧನನೇ! ಗಾಳಿ ಬಂದಾಗ ತೂರಿಕೊಳ್ಳುವ ವಿದ್ಯೆ ದುರ್ಯೋಧನನ ಜಾತಕಕ್ಕೇ ಅಂಟಿಲ್ಲ! ಅವೆಲ್ಲ ಕೃಷ್ಣನಿಗೇ ಸರಿ! ಗ್ರಹಚಾರ ಕ್ರೂರವಾದ ವೇಳೆಯನ್ನು ಕಾದು ವೈರಿಯನ್ನು ಕೊಲ್ಲಿಸುವ ಕುತಂತ್ರ ಅವತಾರಪುರುಷನ ಜೊತೆಯಾಗಿ ಅವತರಿಸಿತು! ಲೋಕದಲ್ಲಿ ಏನೇನೇ ಮಾರ್ಪಾಡಾಗಲಿ ಛಲದಂಕಮಲ್ಲನ ಛಲವನ್ನು ಅಲುಗಾಡಿಸುವಂತಹ ಪರಿಸ್ಥಿತಿ ಎಂದಿಗೂ ಬರಲಾರದು. ಪರಮಾತ್ಮನ ಸರ್ವಶಕ್ತಿಯೂ ಸುಯೋಧನನನ್ನು ಮಾರ್ಪಡಿಸದೆ ಹೋಗಿವೆ. ಭೀಮನ ವ್ಯಂಗ್ಯವಚನವನ್ನಾಲಿಸಿ.

ಇನತನಯನ ನೇರ್ಪಿಂಗ
ರ್ಜುನನಂ ಮುಂಕೊಳ್ವೆ ನೆನ್ನ ತಮ್ಮನ ನೇರ್ಪಿಂ |
ಗನಿಲಜನಂ ಕೊಲ್ವೆಂ ಕಮ
ಲನಾಭ ನೇರ್ಪಿಂಗೆ ನೇರ್ಪುಗೊಳ್ಳದೆ ಮಾಣೆಂ ||

ಕರ್ಣನ ಸಾವಿಗೆ ಮುಯ್ಯಾಗಿ ಅರ್ಜುನನನ್ನು ಮೊದಲು ಕೊಲ್ಲು ವೆನು; ಕೃಷ್ಣ, ಮುಯ್ಯಿಗೆ ಮುಯ್ಯಿ ತೀರಿಸದೆ ಎಂದಿಗೂ ಬಿಡಲಾರ ನಯ್ಯ ”

“ಕೃಷ್ಣ, ಮಧ್ಯಸ್ಥಿಕೆಯನ್ನು ನಾನೇನು ಬಯಸಿದೆನೆ; ನಡುವೆ ನೀನೇಕೆ ತಲೆ ಹಾಕುವೆ; ನಾವೂ ಅವರು ಹೊಂದಿ ಬಾಳಬೇಕೆ; ಇಬ್ಬರಿಗೂ ಮತ್ತೆ ಸಂಧಾನವೆಸಗುವೆಯ; ಒಂದುಬಾರಿ ಒಪ್ಪದವನು ಮತ್ತೆ ಒಪ್ಪೇನೆ” “ವನವಾಸದಿಂದ ಮಲಿನಗೊಂಡ ಧರ್ಮಜನನ್ನು ಕೀರ್ತಿಶಾಲಿ ಯಾಗುವಂತೆಮಾಡಿ · ಪರಿಶುದ್ಧವಂಶದಲ್ಲಿ ಜನಿಸಿದ ನನ್ನನ್ನು ಅಪ ಕೀರ್ತಿಗೆ ಪಕ್ಕಾಗುವಂತೆ ಮಾಡಲು ಬಂದಿರುವೆ. ಬಿಳಿಯದನ್ನು ಕರಿದು ಮಾಡುವುದು ಕರಿಯದನ್ನು ಬಿಳಿದುಮಾಡುವುದು ನಿನ್ನ ಕಸಬು ! ” ಸಾಹಸಧನ ಪರಮಾತ್ಮನಿಗೆ ಒಳ್ಳೆ ಮೆಚ್ಚನ್ನು ಕೊಟ್ಟಿದಾನೆ. ಈಗ ಸಂಧಿಗೆ ದುರ್ಯೋಧನ ಒಪ್ಪುವುದಾದರೆ ಧರ್ಮರಾಯನನ್ನು ಶಾಂತಿ ಪ್ರಿಯನೂ, ಸ್ವಾರ್ಥರಹಿತನೂ ಆದ ಧರ್ಮಜ ರಾಜ್ಯವನ್ನೆಲ್ಲ ತ್ಯಾಗಮಾಡಿ ದನೆಂದು ಲೋಕ ಕೊಂಡಾಡುವುದೂ ನಿಜ; ಅಸಹಾಯನಾದ ದುರ್ಯೋಧನ ತನ್ನ ಛಲವನ್ನೇ ತೊರೆದು ಧರ್ಮರಾಯನಿಂದ ದಾನವಾಗಿ ರಾಜ್ಯ ವನ್ನು ಪಡೆದು ಬದುಕಿದನೆಂದು ಲೋಕ ಹಿಯಾಳಿಸುವುದೂ ನಿಜ. ದುರ್ಯೋಧನನಿಗೆ ಸಾವು ಬದುಕು ಮುಖ್ಯವಲ್ಲ. ಸತ್ತರೆ ಸಾಹಸದಿಂದ ಸಾಯಬೇಕು. ಕೃಷ್ಣನನ್ನು ಕಪಟನಾಟಕ ಸೂತ್ರಧಾರಿಯೆಂದು ವ್ಯಂಗ್ಯ ವಾಗಿ ಪರಿಹಾಸ್ಯಮಾಡಿದಾನೆ.

“ಯದುವಂಶ ಸಾಗರದಲ್ಲಿ ಅಮೃತವೂ ವಿಷವೂ ಜೊತೆ ಜೊತೆ ಯಾಗಿ ಹುಟ್ಟಿತು. ಬಲರಾಮ ಅಮೃತದಂತೆ ಸದ್ಗುಣಸಂಪನ್ನ, ನೀನೋ ವಿಷದಂತೆ ನಿರ್ಗುಣಿ” ಎಂದು ಕೃಷ್ಣನನ್ನು ಹಿಯಾಳಿಸಿ ಬಲರಾಮನನ್ನು ಸುಯೋಧನ ಮನಸಾರೆ ಕೊಂಡಾಡಿದಾನೆ. ಈ ವೇಳೆಗೆ ಸರಿಯಾಗಿ “ಸುಯೋ ಧನಂಗೆ ಸೈಪು ಬರ್ಪಂತೆಯುಂ ಜಂಗಮ ಹಿಮಾಚಲಮೆ ಬರ್ಪಂತೆ” ಬಲರಾಮ ಆ ಯೆಡೆಗೆ ಬರುವನು. ಬಲರಾಮನ ವ್ಯಕ್ತಿತ್ವದ ಘನತೆಗೆ ರನ್ನನ ಈ ಮಾತುಗಳೇ ಸಾಕು. ಬಲರಾಮ ಜಂಗಮ ಹಿಮಾಚಲನಂತೆ!

ಒಂದೇ ಮಾತಿನಲ್ಲಿ ಬಲರಾಮನ ಬಾಳ್ವೆಯನ್ನು ಮಹಾಕವಿ ರನ್ನ ಸಾಕಾರ ಗೊಳಿಸಿದಾನೆ. ಪಾಂಡವರೆಲ್ಲ ಒಂದಾಗಿ ನಿಂತಿರುವುದನ್ನೂ ದುರ್ಯೋಧನ ಒಂಟಿಯಾಗಿ ಪರದೇಶಿಯಾಗಿ ಕಾಣುತ್ತಿರುವದನ್ನೂ ಕಂಡಾಕ್ಷಣ ಬಲರಾಮ ಮಮ್ಮಲಮರುಗುತ್ತಾನೆ. ಕೃಷ್ಣನನ್ನೊಮ್ಮೆ ಅಚ್ಚರಿಗೊಂಡು ಆತ ನೋಡಿದನಂತೆ. ಈ ಪರಿಸ್ಥಿತಿಗೆಲ್ಲ ತನ್ನ ತಮ್ಮನೇ ಕಾರಣನೆಂದುಕೊಂಡು ಈತ ಆಶ್ಚರ್ಯ ಪಟ್ಟಿರಬಹುದು. ಬಲರಾಮನ ಕಾಲಿಗೆ ಮನದೆರಕದಿಂದ ಮಾನನಿಧಿ ಅಡ್ಡಬೀಳುವನು. ಬಲರಾಮ ಈತನನ್ನು ಮೇಲೆತ್ತಿ ಮನಸಾರೆ ಹರಸುವನು. ಕೃಷ್ಣನನ್ನೂ, ಪಾಂಡವರನ್ನೂ ಈತ ಹರಸಲ್ಲೊಲ್ಲದೆ ಸಿಟ್ಟಿನಿಂದ ಅವರನ್ನು ನೋಡಿ ತಮ್ಮನನ್ನು ಕುರಿತು "ಕುರುಕುಲ ಚೂಡಾಮಣಿಯೊಳೇ ನಾಲೋಚಿಸಿರುವೆ" ಎಂದು ಕೇಳಿದಾಗ ಹಿಂದೆ ತಾನೆಸಗಿದ ಸಂಧಿಕಾರ್ಯವೆಲ್ಲ ವಿಫಲಗೊಂಡಿದನ್ನು ಹೇಳಿ "ನೀವಿದಂ ಸುಯೋಧನನೊಳೆ ಕೇಳ್ದು ನಂಬುವುದೆರಳ್ಕುಡಿಯಂ ಫಣಿರಾಜಕೇತನಂ!" ಎಂದನಂತೆ; ತನ್ನ ಮೇಲಿನ ಅಪವಾದವನ್ನು ತಪ್ಪಿಸಿಕೊಳ್ಳುವ ಸಲುವಾಗಿ ಸುಯೋಧನನ ಸತ್ಯಸಂಧತೆಯನ್ನು ಕೃಷ್ಣನೂ ಕೊಂಡಾಡಿದಾನೆ.

"ಏಕೆ ಮುನಿವರ್ ನಿರ್ದೋಷಿಗಳ್ ಪಾಂಡುನಂದನರ್ ಆ ನೋಳ್ಪೆನೆ ಮುನ್ನಂ ಎಂತು ಮನದೊಳ್ ಸಂಧಾನಮುಂ ... .... ಬರ್ಕೆ ಪಗೆವರ್ ಸನ್ನದ್ಧನಾಗಿರ್ಪೆಂ" ಸುಯೋಧನ ಬಲರಾಮನನ್ನು ಕುರಿತು ವೀರಾವೇಶದಿಂದ ಸತ್ಯವನ್ನು ನುಡಿದಿದಾನೆ. ಪಾಂಡವರನ್ನೂ ನಿರ್ದೋಷಿಗಳೆಂದು ಕರೆದಿದಾನೆ. ಯುದ್ಧಕ್ಕೆ ಸಿದ್ಧನಾಗಿ ತೊಡೆ ತಟ್ಟುತ್ತಿದಾನೆ.

ಇವರೆನ್ನನುವರಮುಂ ನೋ
ಡುವುದಲ್ಲದೆ ಬೇರೆ ಪೆರವುಮಾತಿಂಗೆಡೆಯಿ।
ಲ್ಲವಧಾರಿಪುದೆಂದೊಡೆ ಕೌ
ರವೇಂದ್ರನಂ ಮುಸಲಪಾಣಿ ಮನದೊಳ್ ಪೊಗಳ್ದಂ॥

"ನನ್ನ ಮಾತನ್ನು ಲಾಲಿಸಿ; ಇವರೊಡನೆ ಹೋರಾಡುವೆನು. ಇಬ್ಬರ ಹೋರಾಟವನ್ನು ನೋಡುತ್ತಿರಿ; ಇಷ್ಟಲ್ಲದೆ ಇತರ ಮಾತುಗಳಿಗೆ

ಈಗ ಅವಕಾಶವೇ ಇಲ್ಲ" ಎಂದಾಗ ಬಲರಾಮ ಮನದಲ್ಲೇ ಕುರುರಾಜನ ಕೆಚ್ಚನ್ನು ಕೊಂಡಾಡುತ್ತಾನೆ. "ನಿಮ್ಮಯ್ವರಲ್ಲಿ ಯಾರಾದರೂ ಒಬ್ಬ ಈತನೊಡನೆ ಹೋರಾಡಲಿ; ಗೆದ್ದ ಮೇಲೆ ದುರ್ಯೋಧನ ರಾಜ್ಯವಾಳಲಿ ಉಳಿವ ನಾಲ್ವರು ಆತನ ಸೇವೆಯೊಸಗಿಕೊಂಡಿರಲಿ" ಎಂದು ಬಲರಾಮ ಪಾಂಡವರನ್ನು ಕುರಿತು ತನ್ನ ಅಂತ್ಯತೀರ್ಮಾನವನ್ನೀಯುತ್ತಾನೆ. ದುರ್ಯೋಧನನ ಗೆಲವು ಖಂಡಿತವೆಂದು ಬಲರಾಮ ನಂಬಿಕೊಂಡಿದಾನೆ. ಈ ಮಾತನ್ನು ಕೇಳಿ ಭೀಮಸೇನ ಮುಂದೆ ಬಂದು.

ಅರಮಗನಿರ್ಕಜುರ್ನ ನಿ
ರ್ಕರಿಕೆಯ ಮಾದ್ರೀಸುತರ್ಕಳಿರ್ಕಳಿವ.ೆಯುಂ ।
ಪರಿಪಡಿಸಲ್ಕೆ ಹಲಾಯುಧ
ನೆರೆದಿರ್ದಪೆನೆನಗೆ ತೋರಿ ಬಿಡು ಕೌರವನಂ ॥

"ಧರ್ಮರಾಯ ಹಾಗಿರಲಿ; ಅರ್ಜುನನ ಮಾತನ್ನು ಬಿಡಿ; ಹೆಸರಾಂತ ನಕುಲ ಸಹದೇವರು ಸುಮ್ಮನಿರಲಿ; ನೀಚನಾದ ದುರ್ಯೋಧನನನ್ನು ಕತ್ತರಿಸಲು ಸಿದ್ಧನಿದೇನೆ; ಹಲಾಯುಧ, ಕೌರವನನ್ನು ತೋರಿ ಹೋರಾಟಕ್ಕೆ ಬಿಡು"

ಪಗಗೆ ಮೊದಲಿಗನೆನಾ ನಿಡು
ವಗೆ ಕೌರವನಂತದರ್ಕೆ ನೀಮೆಲ್ಲಂ ದಾ ।
ಯಿಗ ತನಮುನಿಲ್ಲಿ ತೋರಲ್
ತಗದೀತಂ ಮುನ್ನಮೆನಗೆ ದೊರೆಯಾಗಿರ್ದಂ ॥

"ದುರ್ಯೋಧನನಲ್ಲಿ ಹಗೆತನವನ್ನು ಮೊಟ್ಟಮೊದಲು ಸಾಧಿಸಿದವನೆಂದರೆ ನಾನೇ; ಕೌರವ ನನಗೆ ಎಂದೆಂದಿಗೂ ಬದ್ಧದ್ವೇಷಿ; ಈ ವೇಳೆಯಲ್ಲಿ ಈತನೊಡನೆ ಹೋರಾಡಲು ನೀವಾರೂ ದಾಯಾದಿಮಾತ್ಸರ್ಯದಿಂದ ಮುನ್ನುಗ್ಗಬೇಡಿ: ಮೊದಲಿನಿಂದಲೂ ನಾನೂ ಸುಯೋಧನ ಸರಿವುದ್ದಿಗಳು" ಭೀಮಸೇನ ಹೋರಾಡಲು ಕಾತರಗೊಂಡು ನುಡಿದಿದಾನೆ.

ಬಹುದಿನದಿಂದಕಾದು ಇಂಥ ಅವಕಾಶವನ್ನು ಯಾರಿಗೂ ಬಿಟ್ಟುಕೊಡಲಾರ,

ಸುಯೋಧನ ಮತ್ತು ಭೀಮ ಧರ್ಮಯುದ್ಧದಲ್ಲಿ ಹೋರಾಡಲು ಅಲ್ಲಿದ್ದ ಹಿರಿಯರೆಲ್ಲ ಒಡಂಬಟ್ಟರು.

ವನರುಹ ನಾಭನ ಬಲದೇ
ವನ ಸಾಕ್ಷಿಯೊಳಿರ್ದು ಕೌರವೇಶ್ವರನಾ ಭೀ ।
ಮನ ಕಯ್ಪೊಯ್ದುಡೆ ತದ್ದೇ
ವನಿಕಾಯಂ ಪೊಗಳ್ದರದಟುಮಂ ಕುರುಪತಿಯಾ ॥

ಕೃಷ್ಣ ಬಲರಾಮರು ಸಾಕ್ಷಿಗಳಾಗಿರುವಾಗ ಕೌರವೇಂದ್ರ ತನ್ನ ಕೈ ಯಿಂದ ಭೀಮನ ಕೈಪೊಯ್ದನು. ಇದನ್ನು ನೋಡಿ ದೇವತೆಗಳೆಲ್ಲ ಸಾಹಸಧನನ ಸಾಹಸವನ್ನು ಮನಸಾರೆ ಕೊಂಡಾಡಿದರು.

ಎನಿತು ಕುರುಕ್ಷೇತ್ರದೊಳೆಡೆ
ಯೆನಿತುಂ ಬರಿದಿಲ್ಲದಂತು ಶವಶತದಿಂತೆ ।
ಕ್ಕನೆತೀವೆ ರಣೋತ್ಸವದಿಂ
ದನಿಲಸುತಂ ತಾನೆ ಸವರಿದಂ ಕೊಳ್ಗುಳಮಂ ॥

ಈ ಹೋರಾಟವನ್ನು ನೋಡಲು ದೇವತೆಗಳೆಲ್ಲ ಆಕಾಶದಲ್ಲಿ ಬಂದು ಸೇರಿದರಂತೆ. ಆಹವಲಂಪಟನಾದ ಭೀಮ ಮುಸಗಿದನಂತೆ. ರನ್ನನ ಕಾವ್ಯಗಳಲ್ಲಿ ಎಲ್ಲೆಲ್ಲೂ ಅಪೂರ್ವವಾದ ನಾಟಕೀಯತೆ ಬಂದು ಕಲಾ ಕೃತಿಯ ಸೊಬಗನ್ನು ಇಮ್ಮಡಿಸಿದೆ. ಈ ಭಾಗದಲ್ಲಂತೂ ಸೊಗಸಾದ ನಾಟಕದೃಶ್ಯವೊಂದು ಮೂಡಿ ನಿಂತಿದೆ. ಸಹೃದಯರೆಲ್ಲ ಪ್ರೇಕ್ಷಕರಾಗಿ ಭೀಮ ದುರ್ಯೋಧನರ ಕಾಳಗವನ್ನು ಉತ್ಸುಕತೆಯಿಂದ ಅವಲೋಕಿಸು ವಂತೆ, ಮಹಾಕವಿರನ್ನ ತನ್ನ ಮಾಯಾಜಾಲವನ್ನು ಬೀಸಿ ವಾಚಕವೃಂದ ವನ್ನು ಸಮ್ಮೋಹನ ಸರಸ್ಸಿನಲ್ಲಿದ್ದಿದಾನೆ. ದುರ್ಯೋಧನನ ಏಕಾಂಗ ಸಾಹಸಕ್ಕೆ ಬೆರಗಾಗುತ್ತೇವೆ. ಧರ್ಮರಾಯನ ಧರ್ಮಪರಾಯಣತೆಗೆ

ತಲೆದೂಗಿ ಪರವಶರಾಗುತ್ತೇವೆ. ಭೀಮನ ಆಟೋಪವನ್ನು ಕಂಡು ಬೆಚ್ಚುತ್ತೇವೆ. ರನ್ನನ ಕವಿತಾಶಕ್ತಿಯನ್ನು ಮೆಚ್ಚಿ ಕೊಂಡಾಡುತ್ತೇವೆ.

---

# ಭೀಮಸೇನ ನೊದೆದಂ ವಾಮಾಂಘ್ರಿಯಿಂ !

ಧರ್ಮಯುದ್ಧಕ್ಕೆ ಎಲ್ಲರೂ ಒಡಂಬಟ್ಟರು; ಎಲ್ಲವೂ ಸಿದ್ಧವಾಯಿತು. ಭೀಮ ಮನಸ್ಸಿನಲ್ಲೇ ಗುರುವಾದ ದ್ರೋಣಾಚಾರ್ಯರಿಗೆ ವಂದಿಸಿದನು; ದುಯೋಧನ ಬಲದೇವನಿಗೆ ನಮಸ್ಕರಿಸಿದನು. ಭೀಮ ದುರ್ಯೋಧನರಿಬ್ಬರಿಗೂ ಗದಾವಿದ್ಯೆಯಲ್ಲಿ ಬಲರಾಮನೆ ಗುರು. ಆದರೂ ಭೀಮಸೇನ ಇಂದು ಆತನಿಗದೆ ದ್ರೋಣರಿಗೆ ಮಾತ್ರ ಮನಸ್ಸಿನಲ್ಲಿ ನಮಸ್ಕರಿಸಿದಾನೆ. ಇಬ್ಬರೂ ತಮಗೆ ಬೇಕು ಬೇಕಾದ ಗದೆಯನ್ನಾರಿಸಿ ಕೊಂಡರು. ಒಬ್ಬರನ್ನೊಬ್ಬರು ಎದುರಿಸಿ ನಿಂತರು. ಹುಬ್ಬುಗಂಟಿಕ್ಕಿ ಇಬ್ಬರೂ ಭಯಂಕರರೂಪನ್ನು ತಾಳಿದರು; ಅತ್ಯುಗ್ರರಾಗಿ ಬಿರುಗಣ್ಣಿಂದ ಕಿಡಿಗಾರುತ್ತಾ ನಟ್ಟದಿಟ್ಟಿಯಿಂದ ಇಬ್ಬರೂ ಕಣ್ಣಾಲ್ಲೆ ಸೆಣೆಸಿದರು. ದೆಸೆದೇವತೆಗಳಿಗೆ ರಕ್ತಬಲಿಯನ್ನು ಕೊಡುವರೋ ಎನ್ನುವ ಹಾಗೆ ಭೀಮದುರ್ಯೋಧನರ ಕಡೆಗಣ್ಣಿನಲ್ಲಿ ಕಡು ಗೆಂಪುಪಸರಿಸಿತು.

ಉರಿಯನುಗುಳ್ವಂತೆ ಬಿಸುನೆ<br>
ತ್ತರನೆತ್ತಂ ಸೂಸುವಂತೆ ಬಿಚ್ಚನೆ ಬಿಟ್ಟಿ।<br>
ರ್ದೆರಡುಂ ಕಣ್ಗಳೊಳವರಿ<br>
ರ್ಬರ ನೊರ್ಬರ್ ನುಂಗುವಂತೆ ನೋಡಿದರೆನಸುಂ ॥

"ಒಬ್ಬೊರನೊಬ್ಬರು ನುಂಗುವಂತೆ ನೋಡಿದರು; ಉರಿಯನ್ನುಗುಳುವಂತೆ ನೋಡಿದರು; ಎತ್ತೆತ್ತಲೂ ಬಿಸಿರಕ್ತವನ್ನು ಚಿಮ್ಮುವಂತೆ ಕಾಣುತ್ತಿತ್ತು. ಇಬ್ಬರು ಎರಡು ಕಣ್ಗಳನ್ನು ಬೆಚ್ಚನೆ ಬಿಟ್ಟದ್ದರು."
"ಉದಯಯಾದ್ರಿಯು ಮಸ್ತಾದ್ರಿಯು ಮುದಗ್ರಕೋಪೋತ್ಕರಂಗ

ಳಿರ್ಪಂತಿರೆ .... .... .... ಗದಾಯುಧದೆ ಭೀಮ ಭುಜಗಧ್ವಜರುಂ''— ಭೀಮ ಉದಯಾದ್ರಿಯಂತೆ, ದುರ್ಯೋಧನ ಅಸ್ತಾದ್ರಿಯಂತೆ; ಅಂತು ಎರಡು ಪರ್ವತಗಳು ಕೋಪದಿಂದ ಉಕ್ಕುತ್ತಿವೆಯಂತೆ. ರನ್ನ ಮಹಾ ಕವಿಯ ಉಪಮಾನ ದಿವ್ಯವಾದುದು. ಈ ಉಪಮಾನದಲ್ಲೇ ಗದಾ ಯುದ್ಧದ ಪರಿಣಾಮವೇನೆಂಬುದು ಅಡಗಿದೆ. ಭೀಮನ ಭಾಗ್ಯೋದಯ ಸನ್ನಿಹಿತವಾಗಿದೆ; ದುರ್ಯೋಧನನ ಬಾಳ್ವೆ ಅಸ್ತಮಿಸುವುದನ್ನೂ ಕವಿ ಅಲಂಕಾರಯುಕ್ತವಾಗಿ ನುಡಿದಿದಾನೆ.

ಇವರಿಬ್ಬರೂ ಸ್ವಲ್ಪ ಸ್ವಲ್ಪ ಮುಂದೆ ಬಂದು ಗದೆಗಳನ್ನು ತಿರುವಿ ತೂಗಿ ನೋಡಿದರು. ಎಡಗಾಲು ಒಳಗಿಟ್ಟು ಬಲಗಾಲನ್ನು ಹೊರಗಿಟ್ಟು ಇಬ್ಬರೂ ದಂಡೆಯೊತ್ತಿ ಕೈನಡುಗಿಸದೆ ಗದೆಯನ್ನು ಲೀಲಾಜಾಲವಾಗಿ ಬೀಸಿದಾಗ ಅದರ ಬೆಡಗು ರಂಜಿಸಿತು.

> ದಪ್ಪರಿದಟ್ಟಂ ಪೊಟ್ಟೆನೆ
> ದೊಪ್ಪದೊಗಪ್ಪೆನೆ ದಿಧಿಲ್ ಬುಧಿಲ್ಲೆನೆ ಮುಯ್ಗಳ್ ।
> ಸೊಪ್ಪುಸೊವಡಪ್ಪಿನಂ ಸೂಳ್
> ತಪ್ಪದೆ ಕಡುಕಯ್ದು ಪೊಯ್ದರೊರ್ವರನೊರ್ವರ್ ॥

"ಒಬ್ಬರ ಗದೆಗೆ ಇನ್ನೊಬ್ಬರ ಗದೆ ತಾಗುತ್ತಿದೆ; ಆಗ ದಟ್ಟ ಪೊಟ್ಟ ದೊಪ್ಪ ದೊಗಪ್ಪ ದಿಧಿಲ್ ಎಂಬ ಭೀಕರದನಿ ಆಗುತ್ತಿದೆ; ಮೈ ನಜ್ಜುಗುಜ್ಜಾಗುವಂತೆ ಒಬ್ಬರನ್ನೊಬ್ಬರು ಹೊಡೆಯುತ್ತಾರೆ. ಏಟಿಗೆ ಏಟಿನಂತೆ ಕ್ರಮವಾಗಿ ಒಬ್ಬರನ್ನೊಬ್ಬರು ಬಾರಿಸುತ್ತಿರುವರು." "ಹಗಲು ಹೊತ್ತಿನಲ್ಲೇ ಉಲ್ಕಾಪಾತವಾಗುವಂತೆ ಇಬ್ಬರ ಗದೆಗಳ ಘಟ್ಟಣೆಯಿಂದ ಚಕ್ಕೆಗಳು ಮೇಲೆಗರಿ ಪ್ರಜ್ವಲಿಸುವಾಗ ಅಂಬರದ ದೇವತೆ ಗಳು ಕಂಗಳನ್ನು ಮುಚ್ಚಬೇಕಾಯಿತು." "ಗದೆ ಗದೆಯನ್ನು ಗಟ್ಟಿಸುವಾಗ ಚಿಮ್ಮಿಬರುವ ಕಿಡಿಗಳು ಎಂಟುದಿಕ್ಕನ್ನೂ ಆವರಿಸಿದವು, ಇವರಿಬ್ಬರ ಕಾಲತುಳಿತದಿಂದೆದ್ದ ಧೂಳು ಅಂಬರಕ್ಕೇರಿ ದೇವತೆಗಳನ್ನೆಲ್ಲ ಬೆದರಿಸಿತು." ಗದಾಯುದ್ಧದ ವರ್ಣನೆ ಅದ್ಭುತವಾಗಿದೆ. ರನ್ನಮಹಾಕವಿ ವೀರಯುಗ

ದಲ್ಲಿ ಬಾಳಿದಾತ. ರಣರಂಗಗಳನ್ನು ಕಣ್ಣಾರೆ ಕಂಡು ಅಲ್ಲಿನ ಭಯಾನಕ ಸನ್ನಿವೇಶಗಳ ಸವಿಯನ್ನುಂಡಾತ. ಚಿತ್ರ ಕಣ್ಣಿಗೆ ಕಟ್ಟುವಂತೆ ನಿರೂಪಿಸುವ ರಸಋಷಿ ಮಹಾಕವಿ ರನ್ನ ! ಆತನ ಕೈಸೋಂಕಿನಿಂದ ಪ್ರಜ್ವಲಿಸಲು ಉತ್ಸಾಹದಿಂದ ಪದಗಳು ತಾನೇ ತಾವಾಗಿ ನುಗ್ಗುತ್ತಿವೆ. ಒಮ್ಮೆ ರನ್ನನ ಕೈಸೋಂಕಿತೆಂದರೆ ಆ ಪದ ಸಜೀವವಾಗಿ ಸತ್ವಪೂರಿತವಾಗಿ ಸಾಹಿತ್ಯಶರಧಿಯ ಅಪೂರ್ವ ರತ್ನವಾಗಿ ಕಂಗೊಳಿಸುವುದನ್ನು ಗದಾಯುದ್ಧದ ಉದ್ದಗಲದಲ್ಲೂ ಕಾಣಬಹುದು.

ಒಬ್ಬರನೊಬ್ಬರು ಮೂದಲಿಸಿಕೊಂಡು ಹೋರಾಡಿದರು; ದುರ್ಯೋಧನ ಹಿಂದೆ ಮಾಡಿರಬಹುದಾದ ಅನ್ಯಾಯಗಳನ್ನೆಲ್ಲ ಒಂದಾದಮೇಲೊಂದಾಗಿ ಭೀಮಸೇನ ಆತನ ನೆನಪಿಗೆ ತಂದುಕೊಟ್ಟು ಗದೆಯಿಂದ ಹೊಡೆಯುತ್ತಾ ಪ್ರತೀಕಾರವೆಸಗಿದರೆ, ದುರ್ಯೋಧನ ತನಗೂ ಭೀಮನಿಂದಾದ ನೋವು ಸಾವುಗಳನ್ನು ನೆನೆಯುತ್ತಾ ಗದೆಯಿಂದಿಕ್ಕಿ ಸೇಡನ್ನು ತೀರಿಸಿಕೊಳ್ಳುವನು. ಅಂತು ರುಧಿರಾಕ್ತಮೂರ್ತಿಗಳಾಗಿ ಇಬ್ಬರೂ ಹೋರಾಡಿದರು. ದಯಾದಾಕ್ಷಿಣ್ಯವನ್ನು ತೊರೆದು ಮಚ್ಚರದಿಂದ ಇಬ್ಬರೂ ಗದೆಯನ್ನೆತ್ತಿ ಹೊಡೆದಾಡಿದರು.

ಚರಣಾಕ್ರಾಂತಂ ಮಹೀಮಂಡಲಮದಿರೆ ಭುಜಾಕ್ರಾಂತಮಾಶಾ
ಗಜೇಂದ್ರೋ
ತ್ಕರಮಾಶಾಭಿತ್ತಿಯಿಂದಂ ಪೆರದೆಗೆಯೆ ಗದಾಕ್ರಾಂತಮುದ್ಭ್ರಾಂತವಿದ್ಯಾ
ಧರಚಕ್ರಂ ಗೆಂಟುಗೆಂಟಾಗಿರಿಸೆ ನಿಜವಿಮಾನಂಗಳಂ ಭೈರವಾಪಂ
ಬರಮಾಕಲ್ಪಾಂತಕಾಲಂ ನೆಗಳ್ದುದು ಸಮರಂ ಭೀಮದುರ್ಯೋಧನೀಯಂ||

"ಭೀಮ ದುರ್ಯೋಧನರ ಕಾಲತುಳಿತಕ್ಕೆ ಭೂಮಂಡಲವೆಲ್ಲ ಅದುರಿಹೋಯಿತು; ಇವರಿಬ್ಬರ ಕೈಬೀಸುವಿಕೆಯಿಂದ ದಿಗ್ಗಜಗಳ ಸಮೂಹವೇ ತಮ್ಮ ನೆಲೆದಪ್ಪಿ ಹಿಮ್ಮೆಟ್ಟಬೇಕಾಯಿತು; ಇವರಿಬ್ಬರೂ ಗದೆಗಳನ್ನು ಬೀಸುವ ಬಿರುಸಿಗೆ ವಿದ್ಯಾಧರಮಂಡಲಗಳೆಲ್ಲ ಮೇಲಕ್ಕೆ ತೂರಿಹೋದವು; ಅವರು ಬೆದರಿ ತಮ್ಮ ವಿಮಾನಗಳನ್ನು ದೂರ ದೂರಕ್ಕೆ ಕೊಂಡೊಯ್ದು

ನಿಲ್ಲಿಸಬೇಕಾಯಿತು. ಇವರಿಬ್ಬರ ಹೋರಾಟ ಭೈರವಾಡಂಬರಕರವಾಗಿತ್ತು. ಕಲ್ಪಾಂತಕಾಲದ ತನಕ ಹೀಗೆ ಹೋರಾಡಿದರು;'' ಇಲ್ಲಿ ಅತ್ಯುಕ್ತಿಯಂತೆ ಕಂಡರೂ ಹೋರಾಟವನ್ನು ಕಣ್ಣಾರೆ ನೋಡಿದವರಿಗೆ (ರನ್ನನೂ ನೋಡಿರಲಿಲ್ಲ; ನೋಡಿದಂತೆ ಭಾವಿಸಿಕೊಂಡಿದ್ದ) ಈ ವರ್ಣನೆ ಸಹಜವಾದುದೆಂದು ಮನವರಿಕೆಯಾಗದಿರದು. ಎಷ್ಟು ಹೋರಾಡಿದರೂ ಇವರಿಬ್ಬರಲ್ಲಿ ಯಾರೂ ಗೆಲಲಿಲ್ಲ.

ಕುರುರಾಜಂ ವಿದ್ಯಾಧರ
ಕರಣದೆ ನೆಗದಂಬರಕ್ಕೆ ಗದೆಯಂ ಕ್ರಮದಿಂ ।
ತಿರಿಪೆ ಧರಾಚಕ್ರಂ ಕೋ
ವರಚಕ್ರಂ ತಿರಿವ ತೆರದೆ ತಿರಿದತ್ತೆನುಸುಂ ॥

"ಕುರುರಾಜ ಅಪೂರ್ವವಾದ ವಿದ್ಯಾಧರಕರಣದಿಂದ ಆಗಸಕ್ಕೆ ನೆಗೆದು ಗದೆಯನ್ನು ತಿರುವಿದಾಗ ಆ ವೇಗಕ್ಕೆ ಭೂಮಂಡಲವೇ ಕುಂಬಾರನ ಚಕ್ರವಾಗಿ ತಿರುಗಿತು''

ತೆರಪಂ ನಿಟ್ಟಿಸಿ ಕುರುಪತಿ
ಬರಸಿಡಿಲೆರಗುವವೊಲೆರಗಿ ಪೊಯ್ಯಲೊಡಂ ಮೆಯ್ ।
ಮರೆದು ಪವನಜನದೇಕೆಂ
ದರಿಯದೆ ಮತಿವಿಕಳನಾಗಿ ಮೂರ್ಛೆಗೆ ಸಂದಂ ॥

"ಅವಕಾಶವನ್ನು ಕಾದು ದುರ್ಯೋಧನ ಬರಸಿಡಿಲೆರಗುವಂತೆ ಮೇಲೆ ಬಿದ್ದು ಭೀಮನನ್ನು ಗದೆಯಿಂದ ಹೊಯ್ದಾಗ ಆತನಿಗೆ ಮೂರ್ಛೆ ಬಂದಿತು. ಭೀಮನಿಗೆ ಇದರ ಅರಿವೇ ಇಲ್ಲದೆ ಮೈಮರೆದುರುಳಿದನು.''
''ವಜ್ರಾಯುಧದ ಪೆಟ್ಟಿನಿಂದ ನೀಲಾಚಲ ಉರುಳುವಂತೆ ಭೀಮಸೇನುರುಳಲು ಅರ್ಜುನ ಕೋಪದಿಂದ ಕೋಲಾಹಲವೆಸಗಿ

ಎಲ್ಲಿಯ ಬಲದೇವಂ ಮ
ತ್ತೆಲ್ಲಿಯ ಸತ್ಯವ್ಯವಸ್ಥೆ ದುರ್ಯೋಧನನಂ ।

ಕೊಲ್ಲದಿರೆನೆಂದು ಭಾರತ
ಮಲ್ಲಂ ಗಾಂಡಿವಕೆ ನೇರಿದಂ ನೆರೆತಿರುವಂ ॥

"ಬಲದೇವನೇಕೆ ಬಂದ, ಧರ್ಮಯುದ್ಧದ ವ್ಯವಸ್ಥೆಯಿಂದೇನು; ದುರ್ಯೋಧನನನ್ನು ಕೊಲ್ಲದೆ ಬಿಡಲಾರೆನೆಂದು ಅಬ್ಬರಿಸಿ ಗಾಂಡೀವಿ ಹೆದೆಯೇರಿಸಿದನಂತೆ."

ಮುಳಿದೇವಂ ಹಲಿ ಕೃಷ್ಣಂ
ಮುಳಿದೇವಂ ಧರ್ಮನಂದನಂ ಮುಳಿದೇವಂ ।
ಮುಳಿದರನಿಕ್ಕುವೆನೆಂದು
ಮ್ಮುಳಿಸಿದರಿರಿಯಲ್ಕೆ ನಕುಲಸಹದೇವರ್ಕಳ್ ॥

"ಬಲರಾಮ ಸಿಟ್ಟಾಗಿ ಏನುಮಾಡಿಯಾನು; ಕೃಷ್ಣ ತಾನೆ ಏಂಗೈದಾನು; ಧರ್ಮರಾಯ ಕೋಪಗೊಂಡರೂ ಚಿಂತೆಯಿಲ್ಲ; ಎಂದುಕೊಂಡು ದುರ್ಯೋಧನನನ್ನು ಕೊಲ್ಲಲು ನಕುಲಸಹದೇವರು ಉಮ್ಮಳಿಸಿದರಂತೆ." "ಎನ್ನ ನನ್ನಿಗೀಗಳೆ ಪರಿಭವವಾಯ್ತೆಂದು ಧರ್ಮಜಂ ಚಿಂತಿಸಿದಂ." ಪಾಂಡವರಿಗೆಲ್ಲ ಮನಸ್ಸಿನಲ್ಲಾದ ದುಃಖವನ್ನೂ ಗಾಬರಿಯನ್ನೂ ಮಹಾಕವಿ ಮನಮುಟ್ಟುವಂತೆ ವಿವರಿಸಿದ್ದಾನೆ. ಎಲ್ಲಕ್ಕಿಂತ ಹೆಚ್ಚಾಗಿ ಧರ್ಮರಾಯನಿಗೆ ತನ್ನ ಒಳ್ಳೆ ಆಚರಣೆಗಳಿಂದ ಇಂಥ ದುರವಸ್ಥೆ ತನಗಾಯಿತೆಂದು ಬೇಸರಗೊಂಡುದನ್ನು ಕರುಣಾಜನಕವಾಗಿ ನುಡಿದಿದ್ದಾನೆ. ಮಹಾಪುರುಷರಿಗೂ ಆಗಾಗ ಫಲಾಪೇಕ್ಷೆಯ ಕಡೆ ಗಮನ ಹೊರಳುವುದನ್ನು ಮಹಾಕವಿ ಹೃದಯ ಸ್ಪರ್ಶಿಯಾಗುವಂತೆ ನಿರೂಪಿಸಿದ್ದಾನೆ.

ಕೃಷ್ಣ ಎಲ್ಲವನ್ನೂ ಸೂಕ್ಷ್ಮವಾಗೀಕ್ಷಿಸುತ್ತಿರುವನು. ಬಲರಾಮನ ಮೊಗವರಳಿತಂತೆ. ಭೀಮ ಸತ್ತನೆಂದುಕೊಂಡು ಆತನೂ ಭ್ರಮೆಪಟ್ಟದಾನೆ. ತಲೆಬಾಗಿದ್ದ ಧರ್ಮರಾಯನನ್ನು ನೋಡಿ ಕೃಷ್ಣನ ಎದೆ ಕಲಕಿಹೋಯಿತಂತೆ. ಕೊನೆಗೆ ತನ್ನ ಕಣ್ಸೊಡೆದು ನಿಜಪರಿಸ್ಥಿತಿಯನ್ನು ಅರ್ಜುನನಿಗರುಹಿದನಂತೆ. ಇತ್ತ ದುರ್ಯೋಧನನ ಇನ್ನೊಂದು ಪೆಟ್ಟಿಕ್ಕಿ

ದ್ದರೆ ಭೀಮಸೇನನವತಾರ ಮುಗಿಯುತ್ತಿತ್ತು. ಆದರೆ ಧರ್ಮಯುದ್ಧ ವೆಂಬುದನ್ನು ಮಹಾನುಭಾವನಾದ ದುರ್ಯೋಧನ ಮರೆತಿರಲಿಲ್ಲ.

ಇರಿಯೆಂ ಬಿಳ್ದನನೆಂಬೀ
ಬಿರುಬಿಂದಂ ಬೀಸೆ ಗದೆಯ ಗಾಳಿಯ ಕೋಳೆ।
ಳ್ದರಿಸಿದುದು ಭೀಮನಂ ಮೆಯ್
ಮರೆವನನಂ ತಂದೆ ಸುತರ್ಗೆ ಕೂರದರೊಳರೇ॥

"ಪಾಪ ಭೀಮ ಮೈಮರೆದುರುಳಿರುವನು; ಬಿದ್ದವನನ್ನು ಹೊಡೆಯ ಲಾರೆ; ಎಬ್ಬಿಸಿ ಹೋರಾಡುವೆನು ಎಂದುಕೊಂಡು ತನ್ನ ಗದೆಯಿಂದ ಗಾಳಿಯಿಟ್ಟು ಶುಶ್ರೂಷೆಯೆಸಗಿದನು. ಗಾಳಿಯ ಮಗನಲ್ಲವೇ ಭೀಮ. ಗಾಳಿ ತನ್ನ ಮಗನನ್ನು ಚನ್ನಾಗಿ ತಡವಿದನು. ಭೀಮ ಮೇಲೆದ್ದನು. ಮಗ ನನ್ನು ಪ್ರೀತಿಸದ ತಂದೆ ಯಾರಿದ್ದಾರೆ!" ದುರ್ಯೋಧನನ ಪಾತ್ರದ ಘನತೆ ತನ್ನ ತುಟ್ಟತುದಿಗೇರಿದೆ. ರಣರಂಗ ಪ್ರಾರಂಭವಾದಮೇಲೆ ದುರ್ಯೋಧನ ಧರ್ಮಪರಾಯಣನಾಗುತ್ತಿದ್ದಾನೆ. ಈ ಸಂದರ್ಭದಲ್ಲಿ ಕರ್ಣನ ಕಗ್ಗೊಲೆ ಯನ್ನು ವಾಚಕವೃಂದ ನೆನೆಯಬೇಕು. ರಥದ ಚಕ್ರವನ್ನು ಅವನೆತ್ತುತ್ತಿರು ವಾಗಲೇ ಕೊಲ್ಲೆಂದು ಅವತಾರಪುರುಷ ಅರ್ಜುನನನ್ನು ಪ್ರಚೋದಿಸಿ ಕಲಿ ಕರ್ಣನನ್ನು ಕೊಲಿಸಿದನು. ಈಗ ಅರ್ಜುನನ ಪಾತ್ರಕ್ಕೂ ದುರ್ಯೋಧನನ ಪಾತ್ರಕ್ಕೂ ಇರುವ ಅಂತರವನ್ನು ಅಳೆದು ನೋಡಿದರೆ ರನ್ನ ಮಹಾಕವಿಯ ಅನುಪಮ ಪಾತ್ರವಾದ ದುರ್ಯೋಧನನ ಘನತೆ ಮನದಟ್ಟಾಗುವುದು.

ಹೀಗೆ ಹೋರಾಡುತ್ತಿದ್ದರೆ ಭೀಮಸೇನ ಆಯಾಸಗೊಳ್ಳಬಹುದು, ದುರ್ಯೋಧನನ ಕೈ ಮೇಲಾಗಬಹುದೆಂದು ಚಿಂತಿಸಿ ಕೃಷ್ಣನ ಮನಸ್ಸು ವಕ್ರ ಮಾರ್ಗಕ್ಕಡಿಯಿಟ್ಟಿತು.

ಪೊಡೆಯಲರಾತಂ ರಾಗದೆ
ತೊಡೆಯಂ ಪೊಯ್ದಪ್ಪವರ್ಗೆ ನೆವದೆ ನೆರನೀತಂಗೀ।
ಯೆಡೆಯೆಂದು ತೋರೆ ಕುಡೆ ಪೊಲ
ಗಿಡದರಿದಂ ಪರಮಪಂಡಿತಂ ಪವನಸುತಂ॥

ಕಮಲನಾಭನಿಗೆ ಭೀಮನ ಮೇಲೆ ಪಕ್ಷಪಾತ; ತನ್ನ ತೊಡೆಯನ್ನು ತಟ್ಟುವ ನೆಪದಲ್ಲಿ ಸುಯೋಧನನ ಮರ್ಮಸ್ಥಾನವಾದ ಆತನ ತೊಡೆಗೆ ಹೊಯ್ಯೆಂದರಿಪಿದನು. ಭೀಮ ಇದನ್ನು ಗ್ರಹಿಸಿದನು;

ತಿಳಿದಾಗಳ್ ನೆರನಿಂತುಟೆಂದು ನೆಲನಂ ಮಾರುದ್ದಿ ಕುಯ್ಯಿಂ ಧರಾ
ತಳದೊಳ್ ಸೂಸಿದ ತನ್ನ ತೀವ್ರಗದೆಯಂ ಕಂಡೆತ್ತಿಕೊಂಡಂಬರ ।
ಸ್ಥಳದಿಂದಂ ಸಿಡಿಲೇಳ್ಗೆಯಿಂದೆರಗಿ ಪೊಯ್ವಾಗಳ್ ಗದಾದಂಡದಿಂ
ಮುಳಿದಿಟ್ಟಂ ಕಲಿ ಸತ್ತ್ರಿಗಂ ಕುರುಕುಭೃಚ್ಚಂಡೋರು ದಂಡಂಗಳಂ ॥

ದುರ್ಯೋಧನನ ದುರ್ಬಲಸ್ಥಳವಾವುದೆಂದು ತಿಳಿದ ಮೇಲೆ ಭೀಮ ಸೇನ ನೆಲವನ್ನುಜ್ಜಿ ಬಿದ್ದಿದ್ದ ಗದೆಯನ್ನೆತ್ತಿಕೊಂಡು ಆಗಸದಿಂದ ಸಿಡಿ ಲೆರಗುವಂತೆ ವೇಗವಾಗಿ ಮೇಲೆಬಿದ್ದು ಕುರುರಾಜನ ಉಗ್ರವಾದ ತೊಡೆ ಗಳಿಗೆ ಗದೆಯಿಂದಿಟ್ಟನು''

ಇಡೆ ತೊಡೆಯುನುಡಿದು ನೆಟ್ಟನೆ
ಕೆಡೆಯುತ್ತಂ ಕರ್ಚಿ ನೆಲನನಾನಿದನೆಂತುಂ ।
ಬಿಡೆನೆಂಬ ತೆರದೆ ಕುಲಗಿರಿ
ಕೆಡೆವಂದದೆ ಕೆಡೆದು ಕೌರವೇಂದ್ರಂ ಮಹಿದಂ ॥

ಗದೆ ತಾಗಿದಾಕ್ಷಣ ದುರ್ಯೋಧನನ ತೊಡೆ ಮುರಿದು ಭೂಮಿಗುರುಳಿ ನೆಲವನ್ನು ಕಚ್ಚಿಕೊಳ್ಳುವನು. ಅಂತು ಕುಲಗಿರಿ ಉರುಳುವಂತೆ ನೆಲಕ್ಕುರು ಳಿದ. ಸತ್ತರೂ ಭೂಮಿಯನ್ನು ತೊರೆಯಲಾರನೆಂದು ನೆಲಕಚ್ಚಿಕೊಂಡಿ ದ್ದನಂತೆ. ಸಂದರ್ಭವನ್ನು ಕರುಣಾಜನಕವಾಗಿ ಮಹಾಕವಿ ನಿರೂಪಿಸಿದ್ದಾನೆ. ಅವತಾರಪುರುಷ ಅನ್ಯಾಯದಿಂದ ಮಹಾನುಭಾವನನ್ನು ಕೊಲ್ಲಿಸಿದನೆಂದು ಕೊಂಡು ಕೊರಗದ ಸಹೃದಯರುಂಟೆ ? ನಿಸ್ಪೃಹರಾಗಿ, ಧರ್ಮಪರಾಯಣ ರಾಗಿ ಬಾಳಿಕೊಂಡಿರಬಹುದಾದ ಪಾಮರರನ್ನೂ ಈ ಪರಮಾತ್ಮ ದುರ್ಮಾ ರ್ಗಕ್ಕೆಳೆದು ಮನುಜಲೋಕದ ಸತ್ಸಂಪನ್ನತೆಗೆ ಧಕ್ಕೆತರುವುದನ್ನು ಯಾರು ತಾನೆ ಸಹಿಸಿಯಾರು; ಅತಿ ಸಾಹಸವಂತನಾದ ಅರ್ಜುನನ ಕೈಲಿ ಎಂತೆಂತಹ ಅನ್ಯಾಯಗಳನ್ನೆಸಗಿಸಿದ ಧರ್ಮರಾಯನ ಬಾಯಲ್ಲೂ ಎಂದೂ ಬಾರದ

ಅನೃತವನ್ನೂ ಹರಿಸಿದ ನೀ ಕೃಷ್ಣ! ಗಂಡಿನೊಳ್ ಭೀಮಸೇನನೆಂದು ಕೊಂಡು ಲೋಕ ಕೊಂಡಾಡಿದ್ದ ಆ ಭೀಮನ ಕೈಲೂ ಧರ್ಮಯುದ್ಧದಲ್ಲಿ ಹೊಡೆಯಬಾರದ ತಾಣಕ್ಕೆ ಹೊಡೆಸಿ ದ್ವಾಪರಯುಗದ ಚಲದಂಕನಲ್ಲಿ ನನ್ನ ಮಹಾನುಭಾವನನ್ನು, ಮಾನನಿಧಿಯನ್ನು ಕೊಲ್ಲಬಾರದ ರೀತಿಯಲ್ಲಿ ಕೊಲ್ಲಿಸಿದನಲ್ಲ ಎಂದು ಪರಿತಪಿಸದ ವಾಚಕನುಂಟೆ! ಕೃಷ್ಣನ ಪ್ರಭಾವಕ್ಕೊಳ ಗಾಗದ ದುರ್ಯೋಧನ ಮಾತ್ರ ಕೊನೆತನಕ ತನ್ನ ನೈಜಸಂಪತ್ತಾದ ಚಲ ವನ್ನು ಅಚಲವಾಗುಳಿಸಿ ಕೊಂಡನೆನ್ನಬೇಕು. ಕೃಷ್ಣನ ಕುತಂತ್ರಕ್ಕೆ ಎಂದಾ ಕುರುರಾಜ ಬಲಿಯಾಗನೆ ಅಜೇಯನಾದನೆಂಬುದೆ ತಪ್ಪಾಗಲಾರದು.

ದುರ್ಯೋಧನ ನೆಲಕ್ಕುರುಳಿ ಧೂಳಲ್ಲುರುಳಾಡುತ್ತಿರುವಾಗ ಭೀಮಸೇನ ಮಕುಟಭಂಗ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳಲು ಕಾಲೆತ್ತಿ ದುರ್ಯೋಧನ ನತ್ತ ನಾರಿದಾಗ

ಬಲದೇವಾದಿಗಳಾಗದಾಗನೊದೆಯಕ್ಕೀಕಾದಶಾಕ್ಷೋಹಿಣೀ<br>
ಬಲ ಲಕ್ಷ್ಮೀಪತಿಯಂ ಪರಾಭವಿಸದಿರ್ ಛೀ ತಕ್ಕುದಲ್ಲೆಂದು ಮಾ<br>
ರ್ಕೊಳಲುಂ ಮಾಣದೆ ಭೀಮಸೇನನೊದೆದಂ ವಾಮಾಂಘ್ರಿಯಿಂ ರತ್ನಸಂ<br>
ಡಲರಶ್ಮಿಪ್ರಕಟಜ್ವಲನ್ಮಕುಟಮಂ ಕೌರವ್ಯರಾಜೇಂದ್ರನಾ ॥

"ಬಲದೇವಾದಿಗಳು ಕೂಡದು ಕೂಡದು, ಹನ್ನೊಂದು ಅಕ್ಷೋಹಿಣೀ ಬಲದಧಿಪತಿಯಾದ ದುರ್ಯೋಧನನನ್ನು ಅಪಮಾನಗೊಳಿಸದಿರು; ಛೀ ತಕ್ಕುದಲ್ಲ ಎಂದು ಅಡ್ಡಬಂದಾಗ್ಯೂ, ಬಿಡದೆ ಭೀಮಸೇನ ತನ್ನ ಎಡ ಗಾಲಿಂದ ರತ್ನಗಳ ಕಾಂತಿಯಿಂದ ಪ್ರಜ್ವಲಿಸುತ್ತಿದ್ದ ಕುರುರಾಜನ ಮಕುಟ ವನ್ನು ಒದೆದನು." ಇಲ್ಲಿ ಭೀಮಸೇನ ಪೂರ್ಣನಾಗಿ ಅಮಾನುಷನಾಗಿ ದ್ದಾನೆ. ಮಾನನಿಧಿಯಾದ ದುರ್ಯೋಧನನ ಚಿತ್ತಕ್ಷೋಭೆಯನ್ನು ಈಗ ಅಳೆಯಲಾದೀತೆ? ಸ್ವಾಭಿಮಾನಿಯಾದ ಸುಯೋಧನ ಎಷ್ಟು ಮರುಗಿರ ಬಹುದು? ಛಲದಂಕಮಲ್ಲ ನೆಲಕ್ಕುರುಳಿರುವಾಗ ಧರ್ಮಜಾನುಜನಾದ ಭೀಮಸೇನ ಈ ನೀಚಕಾರ್ಯವನ್ನೆಸಗಿ ಸಹೃದಯರ ಸಹಾನುಭೂತಿ ಯನ್ನು ಕಳೆದುಕೊಂಡಿದಾನೆ.

ಭೀಮಸೇನನ ಮೇಲೆ ಸುರಾಂಗನೆಯರು ಕಲ್ಪತರುವಿನ ಹೂಗಳನ್ನೆ ರಚಿದರಂತೆ; ಸುರದುಂದುಭಿ ಮೊಳಗಿದುವಂತೆ; ಕೃಷ್ಣಾದಿಗಳು ಆತನನ್ನು ಮೆಚ್ಚಿ ಹರಸಿದರಂತೆ; ದೇವತೆಗಳೂ ಗೆದ್ದೆತ್ತಿನ ಬಾಲ ಹಿಡಿದಿದಾರೆ. ಯಾರು ಮೆಚ್ಚಿದರೇನು? ಸಹೃದಯರು ಮಾತ್ರ ಭೀಮಕೀಟವನ್ನು ಎಂದಿಗಾದರೂ ಮೆಚ್ಚಿಯಾರೆ?

ಬಳದೇವಂ ಭೀಮನ ಭುಜ
ಬಳದೇವಂ ಮನಮನಲೆಯೆ ಕುರುಪತಿಯಂ ಮಾ।
ರ್ಕೊಳೆ ಪರಿಭವಿಸಿದನೆಂದೆಂ
ದಳವಲ್ಲದೆ ಮುಳಿಗಿದು ಕೆಳರ್ದು ಕಿರ್ಚಿದರ್ಾಗಳ್ ॥

"ಬಲರಾಮನಿಗೆ ಭೀಮನೆಸಗಿದ ಕಾರ್ಯವನ್ನು ನೋಡಿ ವ್ಯಥೆಯಾಯಿತಂತೆ; ತಾನು ಅಡ್ಡಬಂದರೂ ಲಕ್ಷಿಸದೆ ಮಾನನಿಧಿಗೆ ಅಪಮಾನವೆಸಗಿದನೆಂದು ಕೆರಳಿ ಕಿಚ್ಚಿದ್ದನಂತೆ." ಬಲರಾಮನ ಜೊತೆಯಾಗಿ ವಾಚಕವೃಂದವೂ ಕಿಚ್ಚೇಳುವಂತಹ ಪ್ರಸಂಗವಿದು. ಭೀಮಸೇನ ಮೈಮರೆದಿದ್ದಾಗ ಇನ್ನೊಮ್ಮೆ ಸಾಹಸಧನ ತನ್ನ ಗದೆಯನ್ನೇನಾದರೂ ಬೀಸಿದ್ದರೆ ಈ ಕೀಟದ ಅವಸ್ಥೆ ಮುಗಿಯುತ್ತಿತ್ತು. ಆದರೆ ಸುಯೋಧನನಿಗೆ ಗೆಲುವಿಗಿಂತ ಸತ್ಯವೇ ಮುಖ್ಯವಾಗಿದೆ. ಕೃಷ್ಣನಿಗಾದರೋ ಸತ್ಯಕ್ಕಿಂತ ಗೆಲುವೇ ಮುಖ್ಯವಾಗಿದೆ. ಕುರುಕ್ಷೇತ್ರ ಪ್ರಾರಂಭವಾದ ಮೇಲೆ ಪಾಂಡವರ ಬಣ್ಣವೇ ಮಾರ್ಪಟ್ಟಿತು. ಅವರು ತಾವಾಗಿ ನೀಚಕೃತ್ಯವೆಸಗಲಿಲ್ಲ. ಪರಮಾತ್ಮನ ಪ್ರೇರಣೆಯಿಂದ ಧರ್ಮರಾಯ, ಭೀಮ ಅರ್ಜುನಾದಿಗಳು ತಮ್ಮ ನೈಜಗುಣವನ್ನು ತೊರೆದು ಅಮಾನುಷರಾಗಿ ಅನಾರ್ಯರಾಗಿ ವರ್ತಿಸಿರುವುದನ್ನು ಭಾರತದಲ್ಲಿ ಯಾರುಬೇಕಾದರೂ ನೋಡಬಹುದು. ಅಚ್ಯುತನ ಅವತಾರ ಇದಕ್ಕೋಸ್ಕರ ಆಯಿತೋ ಏನೋ! ಅನ್ಯಾಯದ ಅಡಿಗಲ್ಲಿನ ಮೇಲೆ ಪಂಚಪಾಂಡವರನ್ನು ಪ್ರತಿಷ್ಠಿಸಿ ಪರಮಾತ್ಮ ತನ್ನ ಅವತಾರದ ಅವಾಂತರವನ್ನು ಮುಗಿಸಿದ ಎಂದು ಪರಿತಪಿಸಿ ನಾವೆಲ್ಲ ಕಣ್ಣೀರು ಹರಿಸುವಂತಿದೆ ಮಾನನಿಧಿಯ ಜೀವನಾಂತ್ಯ!

ಬಲರಾಮ ದುರ್ಯೋಧನನ ಅವಸ್ಥೆಗೆ ಮುಮ್ಮುಲಮರುಗುತ್ತಾ ದ್ವಾರಕೆಗೆ ಹೊರಟುಹೋದ. ಈ ವೇಳೆಗೆ ಕುರುಪತಿಯು ದುರವಸ್ಥೆಯನ್ನು ನೋಡಲೆಂದು ಪಾಂಚಾಲಿಯನ್ನು ಕರೆಸುವರು. ಆಕೆಯನ್ನು ಕುರಿತು ಭೀಮಸೇನ "ಪತಾಕನಿರವನಿದಂ ನೋಡ ಪಂಕೇಜವಕ್ತ್ರೇ!" ಎಂದು ಅಬ್ಬರಿಸಿದನು. "ಕೌರವೇಶ್ವರನೀತಂ ಪಶುವಾಗೆ ಬೇಳ್ದಿನಿನನಂ ಕೋಪಾಗ್ನಿಯಿಂದಗ್ನಿಜೇ!" ಎಂದು ಅಟ್ಟಹಾಸದಿಂ ಕಿರಿದರುನನು. ದುರ್ಯೋದನ ಪಶುವೋ ಭೀಮಸೇನ ಪಶುವೋ ವಾಚಕರು ವಿಮರ್ಶಿಸಲಿ. ಮಾನನಿಧಿಯನ್ನು ಕಾಲಲ್ಲೊದ್ದಾಗಲೇ ಭೀಮಸೇನ ಪಶುವೆಂಬುದನ್ನು ತಾನೇ ತೋರಿಸಿಕೊಟ್ಟ, ಕತ್ತೆಗೇನುಗೊತ್ತು ಕತ್ತುರಿಯ ಬೆಲೆ! "ದುರ್ಯೋಧನನ ದೇಹದರಕ್ತದಿಂದ ನನಗೆ ಅವಭೃತಸ್ನಾನವಾಯಿತು" ಎಂದು ಭೀಮಸೇನ ರಕ್ಕಸನಹಾಗೆ ವರ್ತಿಸಿದಾನೆ. ಅಸುರನಿಗೆ ಅನುಗುಣವಾದ ಮಾತುಗಳೇ ಈತನ ಬಾಯಿಂದ ಬರುತ್ತಿವೆ.

ಪಗೆ ಮುಡಿದುದು ಮುಡಿಯೆಂನೆ ನಗೆ
ಮೊಗದಿಂ ಪಾಂಚಾಳಿ ಮುಡಿಸೆನಾಂ ಪಲಕಾಲಂ ।
ವಿಗತಾಭ್ಯಾಸದೆ ಸತ್ತಿಗ
ಪಗೆಯುಂ ಮುಡಿಯಿಸಿದ ನೀನೆ ಮುಡಿಯಲ್ವೇಳ್ಕುಂ ॥

ದ್ರೌಪದಿಯನ್ನು ಕುರಿತು "ಹಗೆ ಮುಡಿದ, ಇನ್ನು ಮುಡಿಯನ್ನು ಕಟ್ಟಿಕೋ" ಎಂದಾಗ "ನನಗೆ ಮುಡಿಕಟ್ಟುವ ಅಭ್ಯಾಸವೇ ಮರೆತುಹೋಗಿದೆ ಹಗೆಯನ್ನು ಕೊಂದ ನೀನೆ ನನ್ನ ತಲೆಗೂದಲನ್ನು ಗಂಟಿಕ್ಕು" ಎಂದಳಂತೆ. ಈ ವರ್ಣನೆ ಈ ಭಾಗಕ್ಕೆ ಉಚಿತವಾಗಿ ಬಂದಿದೆ. ಭೀಮಸೇನ ತನ್ನ ಕೈಯಿಂದಲೇ ಆಕೆಯ ಕೂದಲನ್ನು ಗಂಟಿಕ್ಕಿದ್ದನು" ಪ್ರಿಯೆ ನಿನ್ನ ತಲೆಗೂದಲಲ್ಲೇ ಅನೇಕ ರಾಜರು, ಕಿರೀಟರಂಜಿತರು, ಅತಿಬಲಶಾಲಿಗಲೂ ಕಡುಗಲಿಗಳಾದ ಅನೇಕ ಕ್ಷತ್ರಿಯರೂ, ಬಹು ಭಾಗ್ಯವಂತರೂ, ಸೋಮಾಮೃತವನ್ನು ಪಾನಮಾಡಿ ಪವಿತ್ರರಾದವರೂ ನಿಶ್ಶೇಷರಾದರು. ನಿನ್ನ ಕೇಶಪಾಶವೇ ಸುಯೋಧನನಿಗೆ ಯಮಪಾಶವಾಯಿತು" ಎಂದು ಹೊಗಳಿ ಮಾಂಗಲ್ಯಮಾಲಾಲಂಕೃತಳನ್ನಾಗಿಮಾಡಿದನಂತೆ.

ಇದರೊಳ್ ಮೂರ್ಧಾಭಿಷಿಕ್ತರ್ ಮಣಿಮುಕುಟಧರರ್ ಕೃಷ್ಣೆ
ಬಾಹಾಬಳಾಗ್ರ್ಯರ್
ಕದನಪ್ರೋಚ್ಚಂಡ ದಂಡಕ್ರಮ ವಿಜಿತರಿಪುಕ್ಷತ್ರಿಯರ್ ವೀರಲಕ್ಷ್ಮೀ ।
ಸದನರ್ ಸೋಮಾನ್ವಯತಾಸ್ವಾದನ ಶುಚಿವದನರ್ ಮುನ್ನಮುಳ್ಳಾಡಿದರ್ ನೋ
ಡಿದು ನಿನ್ನೀ ಕೇಶಪಾಶಂ ಕುರುಕುಲಪತಿಗಾಯ್ತುತ್ತೆ ಕೀನಾಶಪಾಶಂ*
[೮-೩೫]

ದ್ರೌಪದಿಯ ಆಗಿನ ಚಲವನ್ನು ಕಂಡು ಭೀಮಸೇನ ಮಾರುಹೋಗಿ ಮನಸಾರೆ ಆಕೆಯನ್ನು ಮೆಚ್ಚಿ ಕೊಂಡಾಡುವನು.

ಪನ್ನೆರಡು ಬರಿಸಿಮುಲಸದೆ
ಬನ್ನದ ಕೂಳುಂಡು ಬರ್ದಳಲ್ ಪಿಂಗಿದೊಡಂ ।
ತನ್ನಿಂ ಕಾಳಿಕೆ ಪಿಂಗಿದ
ಪೊನ್ನಂತಾ ಕಾಂತೆ ಗೆಯ್ಗೆಕರಮೊಪೆದಿರ್ದಳ್ ॥

ಹನ್ನೆರಡುವರ್ಷ ಅಲಸದೆ ಭಂಗದಿಂದ ಬಾಳಿ ದುಃಖಿತೆಯಾಗಿದ್ದ ದ್ರೌಪದಿಗೆ ಇಂದು ಎಲ್ಲ ನೋವು ನೀಗಿದಂತಾಗಿ ಆಕೆ ಹದಿನಾರು ಬಣ್ಣದ ಅಪರಂಜಿಯಾಗಿ ಕಂಗೊಳಿಸಿದಳು. ಇಲ್ಲಿಯ ವಿವರಣೆ ಸಹಜಸುಂದರವಾಗಿದೆ. ಪಾಂಡವರೆಲ್ಲ ಒಂದಾಗಿ ಕೃಷ್ಣನನ್ನೂ ಸೇರಿಸಿಕೊಂಡು ಭೀಮನ ತೋಳನ್ನು ನಾನಾವಿಧವಾಗಿ ಸುಗಂಧ ದ್ರವ್ಯಗಳಿಂದ ಪೂಜಿಸುವರು. ಇದೆಲ್ಲ ಮಸಣದ ಮಹಾವಿಭವವಾಗಿ ಕಾಣುತ್ತದೆ. ದುರಂತಸನ್ನಿವೇಶದಲ್ಲಿ ಈ ಮಂಗಳ ಕಾರ್ಯಕ್ಕೆ ಏನೇನೂ ಕಳೆ ಕಟ್ಟಲಾರದು.

---

*ಪಂಪಭಾರತ ೧೨-೧೫೭ ನೇ ಪದ್ಯದ ಭಾವ ಇಲ್ಲಿಳಿದಿದ್ದರೂ ಅಲ್ಲಿನಷ್ಟು ಸ್ವಾರಸ್ಯವಾಗಿ ಬಂದಿಲ್ಲ.

# ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ !

ಗಾಂಗೇಯರಿಂದ ದುರ್ಯೋಧನನಿರುವ ತಾಣವನ್ನು ಅರಿತು ಅಶ್ವತ್ಥಾಮ ವೈಶಂಪಾಯನದೆಡೆ ಬರುವನು. ಈತನಿಗಿದುರಾಗಿ ಕಂದಿದ ಮುಖವುಳ್ಳ ಲಕ್ಷ್ಮಿ ಕಾಣಿಸಿಕೊಂಡಾಗ ಇಬ್ಬರಿಗೂ ನಡೆವ ಮಾತುಕತೆಯಲ್ಲಿ ಕುರುರಾಜನ ಭಾಗ್ಯ ಮುಗಿದಿದ್ದೂ ಪಾಂಡವರ ಭಾಗ್ಯ ಬೆಳೆಯುತ್ತಿರುವುದೂ ಗೊತ್ತಾಗದಿರದು. "ಇನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದೆನ್ ಈಗಳ್ ಉತ್ತಮಪುರುಷೋತ್ತಮಂ ಬೆಸಸೆ ಪಾಂಡವರೊಳ್ ನೆರೆಸಲ್ಕೆ ಪೋದಪೆಂ" ಎಂದು ಲಕ್ಷ್ಮಿ ನುಡಿದಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡರೆ ಕೃಷ್ಣನ ಕೈವಾಡ ಎಂಥದೆಂಬ ಪರಿಚಯ ಆಗದಿರದು. ಎಲ್ಲವೂ ಅವನಿಚ್ಛೆ; ಎಲ್ಲರ ಏಳು ಬೀಳುಗಳೂ ಅವನ ಕೈಯಲ್ಲಿವೆ; ಆತನೇ ಸರ್ವಶಕ್ತ; ಎಂಬ ದೃಷ್ಟಿಯನ್ನಿಟ್ಟುಕೊಂಡು ಕವಿ ಈ ಸಂದರ್ಭದಲ್ಲಿ ಈ ಪದ್ಯವನ್ನು ಕಲ್ಪಿಸಿಕೊಂಡಿರಬಹುದು. ಲಕ್ಷ್ಮಿಯನ್ನು ಅಶ್ವತ್ಥಾಮ ಪರಿಹಾಸ್ಯವೆಸಗುವ ಸಂದರ್ಭ ಸಂಪತ್ತಿನ ಅನಿಶ್ಚತೆಯನ್ನೂ, ಸಂಪತ್ತಿಗಾಗಿ ಲೋಕದಲ್ಲಿ ಆಗಾಗ ಏಳಬಹುದಾದ ಆಂದೋಳನಗಳನ್ನೂ ಮನಮುಟ್ಟುವಂತೆ ಮಾಡುತ್ತವೆ. ಕೊನೆಗೆ ಆತ ಲಕ್ಷ್ಮಿಯನ್ನು ಬಲವಂತವಾಗಿ ಮತ್ತೆ ದುರ್ಯೋಧನನತ್ತ ಸೆಳೆವನು.

ಅತ್ತಲಸುರಾರಿ ಬೆಸಸಿದ
ನಿತ್ತಲ್ ರುದ್ರಾವತಾರನೆಳೆದುಯ್ವಪನೆಂ ।
ದತ್ತ ಪುಲಿಯಿತ್ತ ದರಿಯೆಂ
ದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್ ॥

"ಶ್ರೀಕೃಷ್ಣ ಪಾಂಡವರತ್ತ ಹೋಗೆಂದು ಹೇಳಿರುವನು; ಈಗ ಅಶ್ವತ್ಥಾಮ ದುರ್ಯೋಧನನ ಬಳಿಗೆ ಎಳೆದೊಯ್ಯುತ್ತಿರುವನು; ಒಂದು ಕಡೆ ಹುಲಿ, ಇನ್ನೊಂದೆಡೆ ಕಮರಿ; ಅಶ್ವತ್ಥಾಮನಂತೆ ನಡೆದರೆ ಕೃಷ್ಣ ಕೋಪಗೊಳ್ಳುವನು; ಕೃಷ್ಣನ ಪಕ್ಷ ವಹಿಸಿದರೆ ಅಶ್ವತ್ಥಾಮ ಉಗ್ರರೂಪವನ್ನು ತಾಳು

ವನು'' ಎಂದುಕೊಂಡು ಲಕ್ಷ್ಮಿ ದಿಗ್ಭ್ರಮೆಗೊಂಡಳು. ಅಶ್ವತ್ಥಾಮ ಆಕೆಯ ಕಪ್ಪಾದ ಗುಂಗುರುಕುರಳನ್ನು ಹಿಡಿದುಕೊಂಡು ದುರ್ಯೋಧನನ ಚೇಟಿಯಂತೆ ಎಳೆದುಕೊಂಡು ತನ್ನ ಪ್ರಭುವೆಡೆ ಬರುವನು. ಅಶ್ವತ್ಥಾಮನ ವ್ಯಕ್ತಿತ್ವವನ್ನು ಅರಿಯಲು ಈ ಭಾಗದಲ್ಲಿ ಕವಿ ಹೇಳಿರುವ ಕೆಲವು ಮಾತು ಗಳೇ ಸಾಕು. ''ಸಂಗ್ರಾಮದೊಳವಂದಿರಶ್ವತ್ಥಾಮಂಗಾಪೋಶನಂಗೊಳಲ್ ನೆರೆದಪರೆ'' ''ನಿನ್ನನಗಲ್ಚಲ್ಕೆ ಕಪಟಗೋಪಂ ಪ್ರಭುವೇ'' ಪಂಚ ಪಾಂಡವ ರನ್ನೂ ಒಮ್ಮೆಗೆ ಅಶ್ವತ್ಥಾಮ ಆಪೋಶನ ತೆಗೆದುಕೊಳ್ಳುವನಂತೆ ! ಅಂತು ಈತ ರಜೋಗುಣಪ್ರಧಾನನಾದ ಉಗ್ರಮೂರ್ತಿ; ಕೆರಳಿದರೆ ಹಿಂದುಮುಂದು ನೋಡದೆ ಏನು ಬೇಕಾದರೂ ಮಾಡುವಂತಹನು.

ಕುರುರಾಜಂ ತೊಡೆವೇನೆಗೆ
ನರಳನೆ ಕುರುವಾದ ತೊಡೆಯ ಬೇನೆ.ಗೆ ಗಂಡರ್ !
ನರಳಲ್ ತಕ್ಕುದೆ ಅರಸಂ
ವಿರೋಧಿಯಿಂದಾದ ಮಾನಹಾನಿಗೆ ನೊಂದಂ ||

''ದುರ್ಯೋಧನ ಮುರಿದ ತೊಡೆಯ ಬಾಧೆಗೆ ನರಳಿದವನೇ ಅಲ್ಲ; ವೀರನಾದ ದುರ್ಯೋಧನ ಈ ಗಾಯಕ್ಕೆಲ್ಲ ಎಂದಿಗಾದರೂ ವ್ಯಥೆಪಟ್ಟಾನೆ. ಆದರೆ ಭೀಮನೆಸಗಿದ ಮಾನಹಾನಿಯಿಂದಾಗಿ ಈತ ನರಳುತ್ತಿರುವನು'' ಸ್ವಾಭಿಮಾನಿಯಾದ ಸುಯೋಧನನಿಗೆ ಒಪ್ಪುವ ವಿವರಣೆಯನ್ನು ಮಹಾ ಕವಿ ಕೊಟ್ಟಿದಾನೆ. ಎಂದೂ ಅಪಮಾನವನ್ನ ಈತ ಸಹಿಸಿದವನಲ್ಲ. ಈಗ ಆಗಬಾರದ ಅಪಮಾನವಾಯಿತು. ಸೇಡನ್ನೂ ತೀರಿಸಿ ಕೊಳ್ಳಲು ಅವಕಾಶವಿಲ್ಲ. ಮೇಲೇಳುವಂತಿದ್ದರೆ ಆ ಭೀಮನನ್ನು ಬಿಡುತ್ತಿ ದ್ದನೆ. ಹೃದಯವಿದ್ರಾವಕವಾದ ವಾತಾವರಣವಿದು ! ಸಂಜಯನೊಡನೆ ಸಹೃದಯರು ಸುಯೋಧನನಿಗಾಗಿ ಮಮ್ಮಲ ಮರುಗುವರು. ಈ ಸುಯೋ ಧನ ''ತನುಜಾನುಜರ ವಿಯೋಗದ ಮನಕ್ಷತಂ ನೋಯಿಸಕ್ಕೆ ನೆರೆ ಯವು ಸಮರಾವನಿಯೊಳುಡಿದಿರ್ದ ಕಯ್ದುಗಳಿನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ'' ಎಂದು ಹಿಂದೆ ನುಡಿದಿದಾನೆ. ಈಗಲು ಅಷ್ಟೆ ಆತ

ನೋಯುತ್ತಿರುವುದು ಮಾನಾಂಕ್ಷೆಯಿಂದ ಆ ಭೀಮಸೇನ ನೆಲಕ್ಕೆ ಬಿದ್ದ ತನ್ನನ್ನು ಒದ್ದುದಕ್ಕಾಗಿ. ಅಶ್ವತ್ಥಾಮ ನೆಲಕ್ಕುರುಳಿದ್ದ ಕುರುನಂದನ ನನ್ನು ನೋಡಿ ಅಚ್ಚರಿಗೊಂಡು ಕಣ್ಣೀರಿಡುತ್ತಾ

ಕುಳಿಕನ ಪಲ್ಗಳಂ ಮುರಿಯೆ ಮೋದಿದರಾರ್ ಪಿಡಿದೊತ್ತಿ ಸಿಂಹಮಂ
ಮುಳಿಯಿಸಿ ದಾಡೆಯಂ ಪಿಡಿದು ಕಿಳ್ತವರಾರ್ ಮದಹಸ್ತಿಯಂ ನೆರಂ |
ಗೊಳೆ ನೆಲಕಿಕ್ಕಿ ಕೋಡೆರಡುಮಂ ಕುಸಿಯೆತ್ತಿದರಾರ್ ಸುರಾದ್ರಿನಿ
ಶ್ಚಳನಿಬಿಡೋರುಮಂಡಲಮನಾರುಡಿದರ್ ಫಣಿರಾಜಕೇತನಾ ||

"ವಿಷಸರ್ಪದ ಹಲ್ಲು ಮುರಿಯುವಂತೆ ಹೊಡೆದವರಾರು ? ಸಿಂಹ ವನ್ನು ಸಿಟ್ಟಿಗೆಬ್ಬಿಸಿ ಬಲವಾಗಿ ಹೊಡೆದು ಅದರ ದಾಡೆಯನ್ನು ಕಿತ್ತವರಾರು ? ಮದದಾನೆಯ ಮರ್ಮಸ್ಥಾನಕ್ಕೆ ಪೆಟ್ಟಿಟ್ಟು ನೆಲಕ್ಕೆ ಬೀಳಿಸಿ ಅದರ ದಂತಗಳೆರಡನ್ನೂ ಮುರಿದವರಾರು ? ಮೇರುಪರ್ವತ ದಂತೆ ಸದೃಢವಾದ ನಿನ್ನ ತೊಡೆಗಳನ್ನು ಮುರಿದವರಾರು ? " ಎಂದು ಬೆಸಗೊಳ್ಳುವನು. ಅಶಕ್ಯವಾದವುಗಳನ್ನು ಒಂದಾದಮೇಲೊಂದಾಗಿ ನುಡಿದು ಎಲ್ಲಕ್ಕಿಂತ ಅಸಾಧ್ಯವಾದುದು ದುರ್ಯೋಧನನ ತೊಡೆ ಮುರಿ ಯುವುದು ಎಂದಿದಾನೆ ಅಶ್ವತ್ಥಾಮ. ಈ ಮಾತು ನಿಜ. ಮೋಸದಿಂದ ಮುರಿದರೇ ಹೊರತು ಸಾಹಸದಿಂದಲ್ಲ ತಾನೆ. "ಫಣೀಂದ್ರ ಪತಾಕ ವಿಧಿವಶದೆ ನಿನಗುಮೀಪರಿಯಾಯ್ತೇ" ಎಂದು ಅಶ್ವತ್ಥಾಮ ಕಂಬನಿ ಮಿಡಿ ವಾಗ ಕಲ್ಲೆದೆಯೂ ಕರಗೀತು ! ಈಗಲೂ ಸುಯೋಧನನಿಗಾಗಿ ಸೇಡು ತೀರಿಸಲು ಅತ ಸಿದ್ಧನಿರುವನು. "ಇನ್ನುಂ ಪ್ರತೀಕಾರಮನರಿಪು, ಇನ್ನುಂ ನೋಡೆನ್ನ ಶಕ್ತಿಯಂ ಭಕ್ತಿಯುಮಂ" ಎಂದು ಅಂಗಲಾಚುವನು. ಸುಯೋಧನನ ಮೇಲೆ ಈತನಿಗೆಷ್ಟು ಪ್ರೀತಿ ! ಎಲ್ಲರ ಮನವನ್ನೂ ಮಹಾನುಭಾವನಾದ ದುರ್ಯೋಧನ ತನ್ನತ್ತ ಸೆಳೆದಿದ್ದ. ಇಲ್ಲದೇ ಹೋದರೆ ಹನ್ನೊಂದು ಅಕ್ಷೋಹಿಣಿ ಸೇನೆ ಈತನಿಗಾಗಿ ಮಡಿಯುತ್ತಿತ್ತೇ ?

ದುರ್ಯೋಧನನಿಗೆ ಏನೂ ಬೇಕಾಗಿಲ್ಲ. ಆಗಿದ್ದು ಆಗಿಹೋ ಯಿತು; ಪೂರ್ಣವಾಗಿ ನೆಲಕ್ಕುರುಳಿದ್ದಾಯಿತು. ತಾನು ಎಷ್ಟೆಷ್ಟ

ವಿಧವಾಗಿ ಯತ್ನಿಸಿದಾಗ್ಯು ಪಾಂಡವರ ಕೈಯೇ ಮೇಲಾಯಿತು ಎಲ್ಲ ವಿಧಿವಿಲಾಸ ಎಂದು ಈತನರಿತಿರುವನು. ಆದರೂ ಅಶ್ವತ್ಥಾಮ ಈತನಿಗಾಗಿ ಕೊನೆಯ ಪ್ರಯತ್ನಮಾಡಿ ವೈರಿವೃಂದವನ್ನು ನಿರ್ಮೂಲಗೈಯಲು ಕಾತುರನಾಗಿರುವನು.

ಹತದೇಹ ಹತಭುಜದ್ವಯ
ಹತೋರು ಹತಜೀವ ಹತಕಿರೀಟಂ ಹತಹೃತ್ ।
ಪ್ರತೀಕಾರ ಮೆಂಬುದುಂಟೇ
ಗತಿಯಂ ಸಾಧಿಸುವುದಲ್ತೆ ತಾಂ ಪ್ರತೀಕಾರಂ ॥

"ಅಶ್ವತ್ಥಾಮ ನನಗೇತಕ್ಕೆ ಪ್ರತೀಕಾರದ ಚಿಂತೆ; ದೇಹ ಹತವಾಯಿತು; ನನ್ನ ಕಿರೀಟ ನುಚ್ಚು ನೂರಾಯಿತು; ನನ್ನ ಧೈರ್ಯವೂ ಮುಗಿದಿದೆ; ಇನ್ನು ಲೋಕಕ್ಕೂ ನನಗೂ ಏನು ಸಂಬಂಧ ಪರಲೋಕವನ್ನು ಸಾಧಿಸುವುದೇ ನಾನೆಸಗಬೇಕಾಗಿರುವ ಪ್ರತೀಕಾರ" ಎಂದು ನಿರಾಶೆಯಿಂದ ಭಲದಂಕಮಲ್ಲ ನುಡಿದು ವಾಚಕವೃಂದ ಕಂಬನಿ ಮಿಡಿವಂತೆ ಮಾಡಿದಾನೆ. ಹೆಜ್ಜೆ ಹೆಜ್ಜೆಗೂ ಈತನ ಪಾತ್ರದ ಘನತೆ ಬೆಳೆಯುತ್ತಿರುವುದನ್ನು ಯಾರೂ ಬೇಕಾದರೂ ಗಮನಿಸಬಹುದು,

ಆದರೆ ಭೀಮನೆಸಗಿರುವ ನೀಚಕಾರ್ಯವನ್ನು ಸುಯೋಧನ ಮರೆತಿಲ್ಲ. ಮರೆಯುವಂತಿಲ್ಲ.

ಅರಿಚರಣಪಾಂಸುಪತ್ತಿರೆ
ಶರೀರನುಂ ತೊಡೆದುಕಳೆದೆ ವಸ್ತ್ರಾಂಚಲದಿಂ ।
ಗುರುನಂದನ ನೀನೆನ್ನೀ
ಪರಿಭವಪಾಂಸುವನದೆಂತು ಪೇಳ್ ಕಳೆದಪೆಯೋ ॥

"ಭೀಮನ ಪಾದದಧೂಳನ್ನೇನೋ ಬಟ್ಟೆಯಿಂದೊರೆಸಿ ಕಳೆದೆ. ಆದರೆ ನನ್ನ ಮನದಲ್ಲಿ ನಾಟಿಹೋದ ಅಪಮಾನದ ನೋವನ್ನು ಹೇಗೆ ಕಳೆಯುತ್ತೀ?" ಅಶ್ವತ್ಥಾಮನನ್ನು ನಿರಾಶೆಗೊಂಡ ಸುಯೋಧನ ಇಂತು

ಪ್ರಶ್ನಿಸುವುದು ಹೃದಯವಿದ್ರಾವಕವಾಗಿದೆ. ಭೀಮನ ಒದೆತದಿಂದ ಆತ ನೊಂದಿರುವುದನ್ನು ಇಲ್ಲಿ ಮನಗಾಣಬಹುದು.

ಅಶ್ವತ್ಥಾಮ ರುದ್ರನ ಅಂಶ. ಈತನ ಅಳವು ಪಾಂಡವರಿಗೆ ಪರಿಚಯವಿಲ್ಲ. ಈತನು ಮನಸ್ಸು ಮಾಡಿದರೆ ಪಾಂಡವರನ್ನು ಕೊಂದರೂ ಕೊಲ್ಲಬಹುದು. ನನಗಿನ್ನೂ ಜೀವ ಹಾಗೆ ಇದೆ. ಎಷ್ಟೋ ಕಲ್ಲುಗಳನ್ನೆಸೆದುದಾಯಿತು. ಇನ್ನೊಂದನ್ನೂ ಎಸೆದು ಬಿಡೋಣ" ಎಂದು ಚಿಂತಿಸಿ

ಇದುವಂ ನೋಡುವೆನಿನ್ನುಮೆನ್ನೊಡಲೊಳಿನ್ನೀಪ್ರಾಣಮುಳ್ಳನ್ನವೋ
ವದೆ ಕೌಂತೇಯರನಿಕ್ಕಿ ಪಂದಲೆಗಳಂ ತಂದೆನ್ನ ಮುಂದಿಕ್ಕು ಕೂ ।
ರದದಾಯದರ ಮಿಕ್ಕಪಂದಲೆಗಳಂ ಕಣ್ಗಾರೆಕಂಡೆನ್ನ ಚಿ
ತ್ತದೊಳೊಂದುಂ ತೊಡಳಿಲ್ಲದೆನ್ನಸುಗಳಕ್ಕು ತಕ್ಕುಂತಿಯುಂ ಮಾಡುವೆಂ ॥

"ನನ್ನ ಜೀವಹೋಗುವುದಕ್ಕೆ ಮೊದಲೆ ರಕ್ತಸೋರುತ್ತಿರುವ ಪಾಂಡವರ ತಲೆಗಳನ್ನು ತಂದು ನನ್ನ ಮುಂದಿಡು. ನನಗಾಗದ ಪಾಂಡವರ ತರಿದ ತಲೆಗಳನ್ನು ನೋಡಿ ಸಮಾಧಾನದಿಂದ ಸಾಯುತ್ತೇನೆ" ಅಶ್ವತ್ಥಾಮನಿಗೆ ಸುಯೋಧನ ತನ್ನ ಅಂತಿಮ ಆಸೆಯನ್ನು ತಿಳಿಸಿದಾನೆ. ಸಮಾಧಾನದಿಂದ ಆತ ಸಾಯಬೇಕಾದರೆ ತನಗಪಮಾನಮಾಡಿದ ಪಾಂಡವರ ನಾಶವನ್ನು ಕೇಳಬೇಕಂತೆ. ಎಷ್ಟೇ ಆಗಲಿ ಈ ಮಹಾಶಯ ಛಲದಂಕಮಲ್ಲನಲ್ಲವೆ !

"ನೆಲಕಿರಿವೆನೆಂದು ಬಗೆವಿರೆ ಛಲಕಿರಿವೆಂ" ಎಂದು ಭೀಷ್ಮರೊಡನೆ ಹಿಂದೆಯೇ ಸುಯೋಧನ ಸಾರಿದಾನೆ. ಈಗಲೂ ಅಷ್ಟೇ ತನ್ನ ಛಲಕ್ಕಾಗಿ ಪಾಂಡವರನ್ನು ಬಲಿ ಕೇಳುತ್ತಿರುವನು. ತನಗೆ ಅಪಮಾನವಾದಾಗಿಂದ ಈತನ ಛಲ ಹೆಚ್ಚಾಯಿತೇ ವಿನಃ ತಗ್ಗಲಿಲ್ಲ. ಅಶ್ವತ್ಥಾಮ ಇದೇನು ಮಹಾಪ್ರಯಾಸವಾದ ಕೆಲಸವೆ ? ಒಂದೇ ಚಣದಲ್ಲಿ ಮಾಡಿಮುಗಿಸುವೆನು ಎಂದು ದುರ್ಯೋಧನನಿಗೆ ಕೊಡೆಹಿಡಿಯಲು ಲಕ್ಷ್ಮಿಯನ್ನು

ನೇಮಿಸಿ ಚಾಮರವಿಕ್ಕಲು ಭೂಪೇರಿಗೆ ಅನುಜ್ಞೆಯಿತ್ತನು. ಎಷ್ಟಾದರೂ ರಾಜಾಧಿರಾಜನಲ್ಲವೆ ಸುಯೋಧನ !

ಅಶ್ವತ್ಥಾಮನ ಮೇಲೆ ಎರಡು ಕೆಲಸಗಳು ಬಿದ್ದ ಹಾಗಾಯಿತು. ಪಾಂಡವರನ್ನು ಕೊಲ್ಲಬೇಕು; ಅವರ ಸಂದಲೆಗಳನ್ನು ಸುಯೋಧನನೆಡೆ ತರಬೇಕು; ತನ್ನ ಪ್ರಾಣಹೋಗುವ ಮುನ್ನ ಅವುಗಳನ್ನು ಸುಯೋಧನ ನೋಡಿ ಸಾಯಬೇಕು: ಅಂತು ಅವಸರವಸರವಾಗಿ ಕಾರ್ಯ ಮುಗಿಯಬೇಕು. ಅಶ್ವತ್ಥಾಮನಿಗೆ ಒಂದೆಡೆ ಆತುರ, ಇನ್ನೊಂದೆಡೆ ಕಾತರ ! ವೇಗವಾಗಿ ಹಸ್ತಿನಪುರವನ್ನು ಸೇರಿ ಪಾಂಡವರ ಬೀಡಿಗೆ ರಾತ್ರೋರಾತ್ರಿ ನುಗ್ಗಿ ಅಲ್ಲಿದ್ದ ಅಕ್ಷೋಹಿಣೀ ಬಲವನ್ನೆಲ್ಲ ಕೊಂದು ದೃಷ್ಟದ್ಯುಮ್ನನನ್ನು ಮುಟ್ಟಿ ಮೊದಲಿಸಿ ಕೊಲೆಗೈದು ತನಗೆ ಬೇಕಾಗಿದ್ದ ಐದು ತಲೆಗಳನ್ನು ಮಾತ್ರ ಕೊಂಡು ಹೊತ್ತುಹುಟ್ಟುವ ವೇಳೆಗೆ ದುರ್ಯೋಧನನೆಡೆ ಧಾವಿಸಿ ಅವುಗಳನ್ನು ತೋರಿಸಿದನು. ಆ ಮಹಾನುಭಾವ ತಲೆಗಳನ್ನು ಚನ್ನಾಗಿ ನೋಡಿ

ಪವನಜನಾಸ್ಯಮಲ್ತಿದವನಾನನಮು ಪ್ಪೊಡೆ ಮುಟ್ಟಮಿರ್ದು ನೋ
ಡುವುದೆ ಮದೀಯವಕ್ತ್ರಮನೆ ಕೆಮ್ಮನೆ ಪೋಯ್ತುರಿವಿಲ್ಲದಾಯ್ತು ಪಾಂ
ಡವರ ಶಿರಂಗಳಲ್ಲಿವು ಪಾಂಡವಸೂನುಗಳಪ್ಪ ಪಂಚಪಾಂ
ಡವರ ಶಿರಂಗಳಂ ನೆರೆ ವಿಚಾರಿಸದಕ್ಕಟ ಕೊಂಡು ಬರ್ಪುದೇ ||

"ಇದು ಭೀಮನ ತಲೆ ಅಲ್ಲ; ಭೀಮನದೇ ಆಗಿದ್ದರೆ ನನ್ನ ಮುಖವನ್ನು ಕಂಡೂ ಹೀಗೆ ಸುಮ್ಮನೆ ನೆಲದ ಮೇಲೆ ಬಿದ್ದಿರುತ್ತಿರಲಿಲ್ಲ. ನಿನಗೆ ತಿಳಿವಳಿಕೆ ಕಡುವೆಯಾಗಿ ಇಂತಾದುದು: ಇವಾವೂ ಪಾಂಡವರ ತಲೆಗಳಲ್ಲ. ಪಾಂಡವರ ಕೂಸುಗಳಾದ ಪಂಚಪಾಂಡವರ ತಲೆಗಳನ್ನು ತಂದುಬಿಟ್ಟಿಯಲ್ಲ: ಚನ್ನಾಗಿ ವಿಚಾರ ಮಾಡಿ ಯೋಚಿಸದೆ ಹೀಗೇಕೆ ಮಾಡಿದೆ" ಇಲ್ಲಿ ಭೀಮ ಹಾಗು ದುರ್ಯೋಧನರ ನಡುವಣ ಮಾತ್ಸರ್ಯದ ಮಹಾಪರ್ವತವನ್ನು ಮಹಾಕವಿ ನಮ್ಮ ಮುಂದಿಟ್ಟಿದ್ದಾನೆ. "ಪವನಜ

ನಾಸ್ಯಮಲ್ತದು...........ಕೆಮ್ಮನೆ! " ಎಂಬ ವಾಕ್ಯದಲ್ಲಿ ಭಾವತುಂಬಿ ತುಳುಕಿದೆ. ದುರ್ಯೋಧನನಿಗೆ ಮುಖ್ಯವಾಗಿ ಬೇಕಾಗಿರುವುದು ಭೀಮನ ತಲೆ ಮಾತ್ರ!

ಪರಮೇಶ್ವರಾವತಾರನೆ
ಪರಮಜ್ಞಾನಿಯೆ ವಿವೇಕವಿಕಳರ ವೋಲ್ ಬಾ।
ಲರ ತಲೆಯನರಿದು ತಂದೆಯೊ
ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ॥

ಅಯ್ಯೋ ಅಶ್ವತ್ಥಾಮ. ಪರಮೇಶ್ವರನ ಅವತಾರನಲ್ಲಪ್ಪ ನೀನು: ಪರಮಜ್ಞಾನಿಯಲ್ಲಯ್ಯ ನೀನು: ಹೀಗಿದ್ದು ಬುದ್ಧಿಹೀನರಂತೆ ಬಾಲಕರ ತಲೆಯನ್ನೇಕೆ ಹೊಯ್ದೆ: ಕೂಸುಗಳನ್ನು ಕೊಂದು ಪಾಪವನ್ನು ಬೇರೆ ಕಟ್ಟಿಕೊಂಡೆ " ಇಲ್ಲಿ ದುರ್ಯೋಧನ ಮುಮ್ಮುಲಮರುಗಿದಾನೆ. ಹಿಂದೆಂದೂ ಇಂಥ ಅನುಚಿತ ಕಾರ್ಯವನ್ನು ಈತ ನಡೆಸಿರಲಿಲ್ಲ. ಅದೂ ತಾನು ಸಾಯುವ ವೇಳೆಯಲ್ಲಿ ಪಾಪಕಾರ್ಯ ನಡೆದುದಕ್ಕಾಗಿ ಪರಿತಪಿಸಿದ್ದಾನೆ. ಮೊದಲೇ ಪ್ರತೀಕಾರವನ್ನು ಮರೆತು ಸುಮ್ಮನಿದ್ದವನನ್ನು ಹುರುದುಂಬಿಸಿ ತನ್ನ ಹೆಸರಿನಲ್ಲಿ ಇಂಥ ನೀಚಕಾರ್ಯವಾದುದಕ್ಕಾಗಿ ಮಾನನಿಧಿ ಮುಮ್ಮುಲ ಮರುಗಿದ್ದಾನೆ. ಪ್ರಾಯಶ್ಚಿತ್ತಕ್ಕಾಗಿ ಅಶ್ವತ್ಥಾಮನನ್ನು ಹಿಮವತ್‌ಪರ್ವತಕ್ಕೆ ಹೋಗೆಂದು ಕೊನೆಯ ರಾಜಾಜ್ಞೆಯಿತ್ತು ಸಮಾಧಾನಗೊಂಡು ದೇವರನ್ನು ನೆನೆಯುತ್ತಾ ಅಂದು ಸಂಜೆ ಹೊತ್ತು ಮುಳುಗುವ ವೇಳೆಗೆ ತನ್ನ ಜೀವಿತವನ್ನು ಮುಗಿಸಲು ಸಂಕಲ್ಪಿಸಿದನು.

ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ
ಜಂ ಕಿಡುತಿರ್ಪಿನಂ ನಿಜಕರಂಗಳನಂದುಡುಗುತ್ತುಮಿರ್ಪ ಚ।
ಕ್ರಾಂಕಮುಗಲ್ವಿನಂ ಕ್ರಮದಿನಂಬರಮುಂ ಬಿಸುಟಿರ್ಪಿಗಂಧಕಾ
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್॥

"ದುರ್ಯೋಧನ ಸತ್ತುಹೋದ: ಸೂರ್ಯನೂ ಮುಳುಗಿದ. ಕಮಲಗಳೆಲ್ಲ ಮುಚ್ಚಿಕೊಂಡವು: ದುರ್ಯೋಧನನ ಆಪ್ತಮಿತ್ರರ ಮುಖ ಕಂದಿ

ಹೋಯಿತು: ಸೂರ್ಯನ ಬೆಳಕು ಮಾಯವಾಯಿತು: ದುರ್ಯೋಧನನು ಕೈಗಳನ್ನು ಮುದುರಿಕೊಂಡು ಮರಣೋನ್ಮುಖನಾದ: ಚಕ್ರವಾಕದಂಪತಿ ಗಳಗಲಿದವು: ದುರ್ಯೋಧನನ ಸಾಮ್ರಾಟತ್ವ ಮುಗಿದುಹೋಯಿತು. ಭೂಮಿಯಲ್ಲೆಲ್ಲಾ ಅಂಧಕಾರ ಕವಿಯಿತು.'' ದುರ್ಯೋಧನನಂಥ ಮಹಾ ಪುರುಷ ಸತ್ತಮೇಲೆ ಸೂರ್ಯ ಹೇಗಿದ್ದಾನು: ಆತನೂ ಈತನ ಜೊತೆ ಯಾಗಿ ಮುಳುಗಿದನಂತೆ. ಅಂಧಕಾರ ಕವಿಯಿತಂತೆ. ರನ್ನ ಮಹಾಕವಿ ಚರಮಗೀತೆಯನ್ನು ಪಾಡಿದಾನೆ. ಮಹಾಪುರುಷನ ಅವಸಾನಕ್ಕೆ ಪ್ರಕೃತಿ ಯನ್ನು ಹಿನ್ನಲೆಯಾಗಿಟ್ಟು ಕಾವ್ಯ ಪರಿಣಾಮಕಾರಿಯಾಗುವಂತೆ ಮುಗಿಸಿ ದಾನೆ. ಈ ಸಂದರ್ಭದಲ್ಲಿ ಪಂಪಮಹಾಕವಿ ದುರ್ಯೋಧನನಿಗಾಗಿ ಪಾಡಿರುವ ಚರಮಗೀತೆಯನ್ನು ಕೇಳಿದರೆ ತಪ್ಪಾಗದು.

ನುಡಿದುದನೆಯ್ದೆ ತುತ್ತತುದಿಯೊಯ್ದು ವಿನಂ ನುಡಿದಂ ಛಲಂ ಛಲಂ
ಬಿಡಿದುದನೆಯ್ದೆ ಮುಂಪಿಡಿದುದಂ ಪಿಡಿದಂ ಸಲೆ ಪೂಣ್ದು ಪೂಣ್ಕೆ ನೇ |
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನಮುಣ್ಮುಗುಂದನೆ ದಲೇನಭಿಮಾನಧನಂ ಸುಯೋಧನಂ ||*

"ಕೊನೆತನಕ ಆಡಿದ ಮಾತನ್ನೇ ಆಡಿದನು: ಹಿಡಿದ ಛಲವನ್ನೇ ಕೊನೆತನಕ ಸಾಧಿಸಿದನು: ತನ್ನ ಪ್ರತಿಜ್ಞೆಗಾಗಿ ಕೊನೆತನಕ ಹೋರಾಡಿ ದನು: ಎಲ್ಲೂ ಈತ ಅಳುಕಲಿಲ್ಲ: ಎಂದೂ ಬಳುಕಲಿಲ್ಲ: ಸಾಯುವ ತನಕ ಕೆಚ್ಚೆದೆಯಿಂದ ಕಾದಾಡಿದನು: ಎಂಥ ಅಭಿಮಾನಧನನೀ ಸುಯೋಧನ! '' ಛಲಗಾರನಾಗಿ ಹುಟ್ಟಿ ಛಲಗಾರನಾಗಿ ಬಾಳಿ, ಛಲದಿಂದಲೇ ಸತ್ತುಹೋದ. ಈ ಸುಯೋಧನ ಸತ್ತನೇ ಹೊರತ ಈ ಸ್ವಾಭಿಮಾನಿ ಸೋಲಲಿಲ್ಲ !

---

* ಪಂಪಭಾರತ ೧೩–೯೭

# ಎಲ್ಲಿದಂ ಕುರುಮಹೀಪತಿ !

ಪಾಂಡವರ ಕೋಲಾಹಳ ಹೇಳತೀರದು. ಭೀಮನನ್ನು ಕೃಷ್ಣ ಮೊದಲಾಗಿ ಬಹುಜನ ಕೊಂಡಾಡುವರು.

ಕುರುಧರೆಯಂ ನಿಜೋಗ್ರಗದೆಯೋರ್ಗಳಿನುಳ್ತು ಸಮಸ್ತವೈರಿಭೂ
ಪರ ರುಧಿರಾಂಬುವಿಂದೆ ಬಿದಿಮಾಡಿಯೆ ಘಟ್ಟಿತಕುಂಭಿಮುಕ್ತಭೂ ।
ಸುರ ನವಮೌಕ್ತಿಕಪ್ರಕರ ಬೀಜಮನೋಳಿಯೆ ಸೂಸಿ ತಾರಭೂ
ಧರಸಿತಕೀರ್ತಿಯೆಂಬ ಬೆಳಸಂ ಬೆಳೆದಂ ಪರಸೈನ್ಯ ಭೈರವಂ ॥

ಭೀಮಸೇನ ತನ್ನ ಗದೆಯ ಪೆಟ್ಟಿನಿಂದ ಭೂಮಿಯನ್ನುತ್ತ: ಸತ್ತವರ ನೆತ್ತರಿಂದ ನೆಲವನ್ನು ಹದಗೊಳಿಸಿದನು: ತಾನಿಕ್ಕಿದ ಪೆಟ್ಟಿನಿಂದ ಆನೆಗಳ ತಲೆಯೊಡೆದು ಮುತ್ತುಗಳು ಸಿಡಿದವು; ಆ ಮುತ್ತುಗಳನ್ನೇ ಹದಗೊಳಿಸಿದ ಭೂಮಿಯಲ್ಲಿ ಬಿತ್ತಿದನು. ಅಂತು ಕೀರ್ತಿಯೆಂಬ ಬೆಳಸನ್ನು ಹುಲುಸಾಗಿ ಬೆಳೆಸಿದನು. ನೇಗಿಲಯೋಗಿಯ ಕುಶಲಕರ್ಮಕ್ಕೂ ಭೀಮ ನೆಸಗಿದ ಹೋರಾಟದ ಫಲಕ್ಕೂ ರನ್ನಮಹಾಕವಿ ಗಂಟುಹಾಕಿರುವನು. ಈ ಚಿತ್ರ ರಮಣೀಯವಾಗಿದೆ. "ಪೂಣ್ದಂತೆ ಪೂಣ್ಕೆ ತಪ್ಪದೆ ಕೊಲಲೇಂ ನಿನಗಲ್ಲದೆ ತೀರ್ಗುಮೋ ! " ಕೃಷ್ಣ ಮೆಚ್ಚಿ ಭೀಮನನ್ನು ಕೊಂಡಾಡಿದಾನೆ. "ಏಕಾಂಗದಿನಿರಿವರಾರ್ ನಿನ್ನ ತೆರದಿನಿರಿವ ಬೆಡಂಗಾ ! " ಮನಸಾರೆ ನೂರುತಿಯನ್ನು ಹೊಗಳಿದಾನೆ. ರನ್ನ ಬೇಕೆಂದೆ ತನ್ನ ಪ್ರಭುವನ್ನು ಹೊಗಳಿಕೆಯ ಹೊಳೆಯಲ್ಲಿ ತೇಲಿಸಲು ಯತ್ನಿಸಿರುವನು. ಆದರೆ ವಾಚಕವೃಂದಕ್ಕೆ ಈಗ ಅದೊಂದೂ ಬೇಕಿಲ್ಲ. ದುರ್ಯೋಧನನನ್ನು ಸಾವಿಗಾಗಿ ಸಹೃದಯರು ಮೂಕನೋವನ್ನನುಭವಿಸುತ್ತಿರುವಾಗ ಈ ಕೊಂಡಾಟವನ್ನು ಕೇಳುವರಾರು ?

ದುರ್ಯೋಧನನಿಗಾಗಿ ಪರಿತಪಿಸುತ್ತಾ ಧೃತರಾಷ್ಟ್ರ ಗಾಂಧಾರಿಯರು ಈಯೆಡೆ ಬರುವರು. ಸಮ್ರಾಟನ ಪಟ್ಟದರಸಿ ಭಾನುಮತಿಯೂ ಧಾವಿಸು ವಳು: ಕೌರವನ ಅಂತಃಪುರವೆಲ್ಲ ಹೊಟ್ಟೆಹೊಯ್ದು ಕೊಂಡು ಗೋಳಾ ಡುವ ಆರ್ತನಾದವನ್ನು ಕಂಡು ನೋಡುವರೆದೆ ಕರಗಿ ನೀರಾಗದಿರದು. ತಮ್ಮ ಗಂಡನನ್ನು ಹುಡಿಕಿಯೂ ದೊರೆಯದ ನಾರೀವೃಂದ ಧೃತರಾಷ್ಟ್ರ ಹಾಗೂ ಗಾಂಧಾರಿಯರ ಕಾಲಿಗೆ ಕವಿದು ಬಿದ್ದುರುಳಾಡುವ ದೃಶ್ಯ ಹೃದಯ ವಿದ್ರಾವಕವಾಗಿದೆ.

ಎಲ್ಲಿದನೆಲ್ಲಿದಂ ಕುರುಮಹೀಪತಿಯೆಲ್ಲಿದನೆಲ್ಲಿದಂ ಮಹೀ
ವಲ್ಲಭನಿಂದುವಂಶತಿಲಕಾಹ್ವಯನೆಲ್ಲಿದನೆಲ್ಲಿದಂ ಲಸ |
ತ್ಪಲ್ಲವಕೀರ್ತಿ ಚಾರುತರಮೂರ್ತಿ ಫಣೀಂದ್ರಪತಾಕನೆಲ್ಲಿ ತಾ
ನೆಲ್ಲಿದ ನೆಲ್ಲಿದಂ ಗಡ ಮನಃಪ್ರಿಯ ನೆಲ್ಲಿದನೋ ಸುಯೋಧನಂ ||

ದುರ್ಯೋಧನನಿಗಾಗಿ ನಾರಿವೃಂದ ಕಂಬನಿ ಹರಿಸುತ್ತಿರುವ ಈ ಚಿತ್ರ ಕರುಣಾಜನಕವಾಗಿದೆ.

ಧರ್ಮರಾಯ ಗಾಂಧಾರಿಯನ್ನು ಕುರಿತು "ನಿಮಗಾಂ ಮಗನಲ್ಲನೆ ನೀಮೆ ತಂದೆತಾಯುಮವೋಘಮಿನ್ನೆನಗೆ ಪಾಂಡುಮಹೀಪತಿಯಿಂದಮಗ್ಗ ಳಂ" ಎನ್ನುತ್ತಾ ಕಣ್ಣೀರು ಮಿಡಿಯುತ್ತಾನೆ. ಧರ್ಮರಾಯನಿಗೆ ಮಾತ್ರ ಗೆಲುವಿನುನ್ಮಾದ ತಲೆಗೇರಿಲ್ಲ, ಎಂದೆಂದಿಗೂ ಏರಲಾರದು. ಕೊನೆತನಕ ಸುಯೋಧನನನ್ನುಳಿಸಲು ಈತನೂ ವಿಶ್ವಪ್ರಯತ್ನವೆಸಗಿದನು. "ನಾ ವೈದುಜನವೂ ನಿಮ್ಮ ಸೇವೆಯೆಸಗಿಕೊಂಡಿರುತ್ತೇವೆ. ಮೊದಲಂತೆ ತಾವೇ ರಾಜರಾಗಿರಿ; ನಮ್ಮನ್ನು ನೋಡಿಕೊಂಡು ಸತ್ತವರನ್ನು ಮರೆಯಿರಿ" ಎಂದು ಈತ ಅಂಗಲಾಚುತ್ತಾನೆ. ಆಗ ಧೃತರಾಷ್ಟ್ರ ಈತನೊಡನೆ

ಎಮಗಿನ್ನುಂ ಮಾನಸವಾ
ಳ ಮೋಹಮಿಲ್ಲಿಂದು ನಿನ್ನನಿನಿತಂ ಬೇಳ್ಪೆಂ !

ಯಮನಂದನ ಅಸುವೊಸರ್ದರ
ಸು ಮಕ್ಕಳಂ ಕುಡವುದವರ ವನಿತೆಯರ್ಗೀಗಳ್ ||

"ಬಾಳುವ ಆಶೆ ನಮಗಿನ್ನೆಲ್ಲಿ ? ಮೋಹಪಡಲು ಏನುಳಿದಿದೆ ? ಧರ್ಮ ರಾಯ, ಸತ್ತ ರಾಜಪುತ್ರರ ದೇಹಗಳನ್ನು ಅವರವರ ಮಡದಿಯರಿಗೆ ಕೊಡು; ಇವೇ ನನ್ನಕೊನೆಯ ಬೇಡಿಕೆ;" ಮಕ್ಕಳನ್ನೆಲ್ಲ ಕಳಕೊಂಡ ಮಾತಾಪಿತೃಗಳ ಕರುಣಾಜನಕಸ್ಥಿತಿಯನ್ನು ರನ್ನಮಹಾಕವಿ ಹೃದಯಸ್ಪರ್ಶಿಯಾಗುವಂತೆ ಚಿತ್ರಿಸಿದಾನೆ. ಧೃತರಾಷ್ಟ್ರ ಗಾಂಧಾರಿಯರು ಜೀವನದಲ್ಲಿ ಬೇಸರಗೊಂಡಿ ರುವುದನ್ನು ಮನಮುಟ್ಟುವಂತೆ ವಿವರಿಸಿದಾನೆ. ಧರ್ಮರಾಯ ಎಲ್ಲರ ಅಂತ್ಯಸಂಸ್ಕಾರಗಳನ್ನು ತಾನೇ ಮಾಡುವುದಾಗಿ ಮುದುಕರಿಬ್ಬರಿಗೂ ನಂಬುಗೆಯಿಯಾಯುತ್ತಾನೆ.

ಇತ್ತ ಕುಂತಿ ಕರ್ಣನ ಕಳೇಬರವನ್ನು ಕಂಡು ಕಂಬನಿ ಮಿಡಿದು ಗೋಳಾಡುವಳು. ಅಂತು ಕುರುಕ್ಷೇತ್ರ ಮುಗಿದರೂ ಎರಡುಪಕ್ಷದಲ್ಲಿ ಯಾರಿಗೂ ಸುಖವಿಲ್ಲ. ಕರ್ಣವೃತ್ತಾಂತವನ್ನು ಕೇಳಿ ಪಂಚಪಾಂಡವರು "ಪ್ರೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ ಕೊಂತಿಯಂ !" ಕರ್ಣ ವೃತ್ತಾಂತದಿಂದ ಪಾಂಡವರು ನಿಸ್ಸಹಾಯರಾಗಿ ನೋವುಣ್ಣಬೇಕಾಯಿತು. ಕೃಷ್ಣ ಕ್ಷಾತ್ರಧರ್ಮನ್ನರುಹಿ ಎಲ್ಲರಿಗೂ ಸಮಾಧಾನವೆಸಗಲು ಯತ್ನಿಸು ವನು. ಎಷ್ಟೆಷ್ಟರಮಟ್ಟಿಗೆ ಸಮಾಧಾನಗೊಂಡರೋ ದೇವರೇ ಬಲ್ಲ ! ಎಲ್ಲರ ಸಂಸ್ಕಾರವೂ ಮುಗಿಯಿತು. ಧೃತರಾಷ್ಟ್ರ ಗಾಂಧಾರಿ ಹಾಗು ಕುಂತಿ ಅನಶನವ್ರತವನ್ನು ತಾಳಿ ವ್ರತಬದ್ಧರಾಗಿ ಸತ್ತು ಮೋಕ್ಷಕ್ಕೆ ಹೋದರಂತೆ.

ಧರ್ಮರಾಯ ಕೃಷ್ಣನಿಗೆ ಕೈಮುಗಿದು:—

ಇನಿತೊಂದುಗ್ರ ಸಮಸ್ತಭಾರತ ಮಹಾಭಾರತಯುದ್ಧಂ ಮುಕುಂ
ದ ನಿಜಾನುಗ್ರಹದಿಂದಮಾಯ್ತು ಕಿರಿಯಂ ಪಾರ್ಥಂ ಮಹೀಮೋಹಮಿ |
ಲ್ಲೆನಗೀತಂ ಕುರುಯುದ್ಧಲಬ್ಧಜಯನೀ ಭೀಮಂಗೆ ನೀಂ ಪಟ್ಟ ಬಂ
ಧನಮಂ ಮಾಳ್ಪುದದರ್ಕೆ ಹಸ್ತಿನಾಪುರ ಪ್ರಸ್ಥಾನಮಂ ಮಾಡುವಂ ||

"ಮುಕುಂದ, ಈ ಕುರುಕ್ಷೇತ್ರದಲ್ಲಿ ನಿನ್ನ ಕೃಪೆಯಿಂದ ನನುಗೆ ಜಯವಾಯಿತು; ಪಾರ್ಥ ಇನ್ನೂ ಚಿಕ್ಕವನು; ನನಗೆ ರಾಜ್ಯದಾಸೆಯಿಲ್ಲ; ಕೌರವರನ್ನೆಲ್ಲ ಗೆದ್ದ ಈ ಭೀಮಸೇನನಿಗೆ ನೀನೇ ಪಟ್ಟಗಟ್ಟಬೇಕು; ಅದರಿಂದ ಹಸ್ತಿನಾಪುರಕ್ಕೆ ಹೋಗೋಣ ನಡೆ" ಧರ್ಮರಾಯ ಎಲ್ಲರನ್ನು ಕರೆಕೊಂಡು ಹಸ್ತಿನಾಪುರಕ್ಕೆ ಬರುವನು. ಧರ್ಮರಾಯನಿಗೆ ರಾಜ್ಯದಾಸೆ ಎಳ್ಳಷ್ಟೂ ಇಲ್ಲ. ರಾಜ್ಯಕ್ಕಾಗಿ ಧರ್ಮರಾಯ ಯುದ್ಧಮಾಡಿದವನೂ ಅಲ್ಲ. ಐದು ಹಾಳೂರನ್ನು ಅಥವ ಒಂದೇ ಒಂದನ್ನಾದರೂ ಕೊಟ್ಟರೆ ಯುದ್ಧವೇ ಬೇಡವೆಂದು ಈ ಧರ್ಮಪುತ್ರನೇ ಹಿಂದೆ ಕೃಷ್ಣನೊಡನೆ ನುಡಿದಿದ್ದ; ಯುದ್ಧ ಅನಿವಾರ್ಯವಾಯಿತು. ಹೋರಾಟದಲ್ಲಿ ಎಲ್ಲರೂ ಮಣ್ಣುಮುಕ್ಕಿದರು. ಇದನ್ನು ಕಂಡು ಈತ ಮಮ್ಮಲ ಮರುಗಿದಾನೆ. ದುರ್ಯೋಧನನಿಗೆ ಎಲ್ಲವನ್ನೂ ತೊರೆದು ಹಾಯಾಗಿರೋಣವೆಂದು ಪ್ರಯತ್ನವನ್ನೆಸಗಿ ವಿಫಲನಾದ; ಕೊನೆಗೆ ದುರ್ಯೋಧನನೂ ಸತ್ತ. ಧರ್ಮರಾಯನಿಗೆ ರಾಜ್ಯದಾಸೆಯಿಲ್ಲದಿರುವುದು ಸಹಜವಾಗಿದೆ. ಇದರಿಂದ ಈತನ ಪಾತ್ರದ ಘನತೆ ಮುಗಿಲು ಮುಟ್ಟಿದೆ.

ದೆಸೆಯಂ ತೆಕ್ಕನೆ ತೀವೆ ತಾಟಿತ ಮಹಾಭೇರೀರವಂ ವಿಪ್ರರಿ
ಣ್ದೆಸೆಯೊಳ್ ವೇದನಿನಾದದಿಂ ಪರಸೆ ಪಂಕೇಜಾಕ್ಷಿಯರ್ ಕೂಡಿ ಸಂ ।
ತಸದಿಂ ಸೇಸೆಯನಿಕ್ಕೆ ಪಾಂಡವಬಲಪ್ರಾಕಾರವೀರಂಗೆ ಸಾ
ಹಸ ಭೀಮಂಗೆ ಮನೋಮುದಂ ಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ ||

"ಭೀಮನಿಗೆ ಕೃಷ್ಣ ಪಟ್ಟಗಟ್ಟಿದನು; ಆಗ ಭೇರೀರವ ದಿಕ್ಕುದಿಕ್ಕಿಗೂ ತಾಟಿತುಂಬಿತು; ಬ್ರಾಹ್ಮಣರು ಎಂಟು ದಿಕ್ಕಿನಲ್ಲೂ ವೇದಘೋಷದಿಂದ ಹರಸಿದರು; ಪಂಕಜಾಕ್ಷಿಯರು ಸಂತೋಷದಿಂದ ಪಾಂಡವ ಬಲಪ್ರಾಕಾರನಿಗೆ, ಸಾಹಸಭೀಮನಿಗೆ ಸೇಸೆಯಿಟ್ಟರು;" ರನ್ನ ಮಹಾಕವಿ ಸಂಪ್ರದಾಯಬದ್ಧನಾಗಿ ತನ್ನ ದುರಂತ ಕಾವ್ಯವನ್ನು ಮಂಗಳಕರವಾಗಿ ಮುಗಿಸಲು ತೊಡಗಿ ವಿಫಲನಾಗಿರುವನೆಂದೇ ಹೇಳಬೇಕು. ಇಂತಾದುದರಿಂದ ರನ್ನನ ಕಲಾಕುಶಲತೆ ಗಗನಚುಂಬಿತವಾಯಿತು. ಅಪೂರ್ವವಾದ ದುರಂತ ಕಾವ್ಯವೊಂದನ್ನು ಈ ಮಹಾಕವಿ ಕನ್ನಡನಾಡಿಗಿತ್ತಿದಾನೆ.

# ರನ್ನನ ಪಾತ್ರಸೃಷ್ಟಿ

ದುರ್ಯೋಧನ:—ಪಾತ್ರಸೃಷ್ಟಿಯಲ್ಲಿ ರನ್ನಮಹಾಕವಿ ಅಪೂರ್ವ ಕುಶಲತೆಯನ್ನು ತೋರಿದಾನೆ. ಆತನಿಂದ ಸೃಷ್ಟಿಯಾಗಿರುವ ಪ್ರತಿಯೊಂದು ಪಾತ್ರವೂ ಓದುಗರ ಮನದಲ್ಲಿ ಅಚ್ಚಳಿಯದೆ ನಿಲ್ಲದಿರಲಾರದು. ದುರ್ಯೋಧನನ ಪಾತ್ರನಿರ್ಮಾಣದಲ್ಲಂತೂ ಅಲೌಕಿಕ ಕೈಚಳಕವನ್ನು ಕಾಣದಿರಲಾರೆವು. ದುರ್ಯೋಧನನನ್ನು ದುರಂತ ವ್ಯಕ್ತಿಯನ್ನಾಗಿ ಕಡೆಯಲು ತನ್ನ ಪ್ರತಿಭೆಯನ್ನೆಲ್ಲ ಕವಿ ಮೀಸಲಾಗಿಟ್ಟಿದಾನೆ. ಸಹೃದಯರ ಗಮನವನ್ನೆಲ್ಲ ಮತ್ತೆ ಮತ್ತೆ ದುರ್ಯೋಧನನ ಪಾತ್ರದಕಡೆ ಸೆಳೆದು ಆತನ ಛಲವನ್ನೂ, ಏಕಾಂಗ ಸಾಹಸವನ್ನೂ ಕಂಡು ಕನ್ನಡಿಗರು ಮೆಚ್ಚುವಂತೆ ನಿರೂಪಿಸಿದ್ದಾನೆ. ರನ್ನನ ದುರ್ಯೋಧನ ಅರಗಿನ ಮನೆಯಲ್ಲಿ ಪಾಂಡವರನ್ನು ಸುಡಲು ಯತ್ನಿಸಿದ ಪಾತಕಿಯಲ್ಲ; ಅಬಲೆಯ ಸೀರೆಯನ್ನು ಸಭಾಂಗಣದಲ್ಲಿ ಸೆಳೆಸಿ ಗಹಗಹಿಸಿ ನಕ್ಕನರಾಧಮನಲ್ಲ; ಅವನೆಸಗಿದ ನೀಚಕೃತ್ಯಗಳನ್ನು ಆಗಾಗ ಓದುಗರ ಗಮನಕ್ಕೆ ತಂದರೂ ಕಾವ್ಯದುದ್ದಕ್ಕೂ ಆತನ ಸಾಹಸ, ಸಹೃದಯತೆ, ಸ್ನೇಹಪರತೆ ಎಲ್ಲಕ್ಕಿಂತ ಹೆಚ್ಚಾಗಿ ಶತ್ರುಪಕ್ಷದ ವೀರನ ಮರಣವನ್ನು ಕಂಡು ಕಂಬನಿ ಮಿಡಿಯುವಿಕೆ ಈ ಸನ್ನಿವೇಶಗಳಿಗೆ ಸಹೃದಯರನ್ನು ಸೆಳೆದು ಎಲ್ಲರೂ ಆತನನ್ನು ಕೊಂಡಾಡುವಂತೆ, ಹಾಗೂ ಆತನ ಸಾವಿಗಾಗಿ ಪರಿತಪಿಸುವಂತೆ ಮಾಡಿದಾನೆ.

ದುರ್ಯೋಧನ "ತನುಜಾ....ವಜ್ರಮನನಪ್ಪೆನ್ನಂ" ||೫-೪ ಎಂದಾಗ ಕಂಬನಿ ಮಿಡಿಯದರಾರು ? "ನಿಜಸಾಹಸ ದೇರಾನುಮರಣಮೆಮಗಕ್ಕೆ ಗಡಾ" ಎಂದು ಅಭಿಮನ್ಯುವನ್ನು ಬೇಡಿದ ಸಹೃದಯನಾದ ಸುಯೋಧನನ್ನು ಮೆಚ್ಚದಿರಲು ಸಾಧ್ಯವೆ ? ಕರ್ಣನ ಕಳೇಬರದಿದಿರು ಸುಯೋಧನ ಕಣ್ಣೀರುಹರಿಸಿ ವಾಚಕವೃಂದವನ್ನು ಶೋಲಿಸುವನು. ಈ ಭಾಗದಲ್ಲಿ ಈತನ ಸ್ನೇಹಸಾಗರವೇ ನಮ್ಮಿದಿರು ನಿಂದು ಭೋರ್ಗರೆಯದಿರದು. "ನೆಲಕಿರಿವೆನೆಂದು ಬಗೆವಿರೆ ಚಲಕಿರಿವೆಂ" ಎಂದು ಭೀಷ್ಮನೊಡನೆ ಈ ಮಹಾನುಭಾವ ನುಡಿದ ಮಾತನ್ನು ಕೇಳಿ ರೋಮಾಂಚನಗೊಳ್ಳದಿರಲು ಸಾಧ್ಯವೇ?

“ನೀರೊಳಗಿರ್ದುಂ ಬೆಮರ್ದನುರುಗಪತಾಕಂ” ಎಂದು ರನ್ನಮಹಾಕವಿ ಆ ಸಂದರ್ಭವನ್ನು ಚಿತ್ರಿಸುವಾಗ ದುರ್ಯೋಧನನ ಛಲವನ್ನು ಕಂಡು ಕೊಂಡಾಡದಿರಲು ಹೇಗಾದೀತು. ಗತಿಯಂ ಸಾಧಿಸುವುದಕ್ತೆ ಪ್ರತೀಕಾರಂ” ಛಲಗಾರ ನಿರಾಶನಾಗಿ ನೊಂದು ನುಡಿದಾಗ ವಾಚಕರಿವೆ ಕರಗದಿರಲು ಸಾಧ್ಯವೇ? “ಬಾಲರ ತಲೆಯನರಿದು ತಂದೆಯೋ! ” ಎಂದು ಪರಿತಪಿಸುವ ಸುಯೋಧನನ್ನು ಮಹಾನುಭಾವನೆನ್ನದಿರಲು ಎಂದಿಗಾದರೂ ಸಾಧ್ಯವಾದೀತೆ? “ಕುರುರಾಜನ ಶೀಲದಲ್ಲಿದ್ದ ಅತಿಭರವಸೆ, ಅತಿ ದಿಟ್ಟತನ ಇವು ಆತನ ಮಹಾವಿನಾಶಕ್ಕೆ ಕಾರಣವಾದುವು, ರನ್ನನ ಗದಾಯುದ್ಧದ ಕೌರವನ ಘನತೆಯು ಆತನ ಅಂತ್ಯವನ್ನು ಇನ್ನೂ ದುಃಖಕರವಾದುದನ್ನಾಗಿ ಮಾಡುವುದು. ಗದಾಯುದ್ಧವು ಕೌರವ ಜೀವನನಾಟಕದ ದುಃಖಾಂತವಾದ ಕೊನೆಯ ಅಂಕ. ಕವಿಚಕ್ರವರ್ತಿಯು ಕಳಂಕಿತ ದುರ್ಯೋಧನನನ್ನು ನಮ್ಮ ಮುಂದಿಡಲು ಇಷ್ಟಪಡನೆ ಬರೀ ಘನತೆಯನ್ನೇ ಹೊರಹೊಮ್ಮಿಸುವ ಅವನ ಜೀವನಮಾನದ ಅಂತ್ಯಭಾಗನನ್ನೇ ತನ ಕಾವ್ಯದ ವಿಷಯವನ್ನಾಗಿಟ್ಟುಕೊಂಡಿವಾನೆ”*

ಭೀಮಸೇನ:— ಇರಿವಬೆಂಡಗನನ್ನು ಕೊಂಡಾಡುವುದಕ್ಕಾಗೆ ಸಾಹಸಭೀಮವಿಜಯವನ್ನು ರನ್ನ ರಚಿಸಿದ್ದು. ಕಾವ್ಯಸಾಗಿದಂತಿಲ್ಲ ರನ್ನನ ಮನಸ್ಸನ್ನು ದುರ್ಯೋಧನನ ಪಾತ್ರದ ಘನತೆ ಆವರಿಸಿಕೊಳ್ಳುತ್ತದೆ. ಭೀಮನನ್ನು ಕಾವ್ಯದುದ್ದಕ್ಕೂ ವೇಳೆ ದೊರೆತಾಗಲೆಲ್ಲ ಕೊಂಡಾಡಿದ್ದರೂ ಅದರಲ್ಲಿ ಕವಿಮನಸ್ಸು ಲೀನವಾಗಲಿಲ್ಲ. ನಿಜವಾಗಿ ಆಗಿರುವುದು ಭೀಮನನ್ನು ರನ್ನ ಕೊಂಡಾಡಿಲ್ಲ; ಹಾಗು ಭೀಮಪಾತ್ರದ ಘನತೆ ಕುಗ್ಗಿಹೋಗಿವೆ; ತದ್ವಿರುದ್ಧವಾಗಿ ಸುಯೋಧನನ ಪಾತ್ರ ಮುಗಿಲುಮುಟ್ಟಿದೆ. ರನ್ನ ಪ್ರತಿಭಾಸಂಪನ್ನ; ದುರ್ಯೋಧನನ ಪಾತ್ರ ರಚನೆಯಲ್ಲಿ ರಸಾವೇಶಗೊಂಡು ರನ್ನನ ಕವಿತಾವಾಣಿ ಹೃದಯಂಗಮವಾಗಿ ಹೊರಹೊಮ್ಮಿದೆ. ಈತ ನೆನದಿದ್ದೇ ಒಂದು, ಆಗಿರುವುದೇ ಒಂದು.

---

*ಶ್ರೀ. ಕೆ. ವಿ. ಪುಟ್ಟಪ್ಪನವರು, ರನ್ನಕವಿ ಪ್ರಶಸ್ತಿ, ಪು. ೧೬೧

"....ಪ್ರತಿಭಾವಂತನ ಹೃದಯಾಬ್ಜದೊಳ್ ವಾಣಿ ತಾಂ
ನೆಲೆಸಿ ಎಚ್ಚರಿಸುವಳ್ ದಿವ್ಯವೀಣಾನಾದ ತರಂಗಮಂ ।
ನೋಡ್ ತನ್ನಿಚ್ಛೆಗೊಲಿದಂತೆ ಕುಣಿಪಳ್
ಕಾವ್ಯಕುರಂಗಮಂ ಕವಿಯಂತರಂಗಮಂ ॥"*

ಕುರುಭೂಭೃದ್ವಲ .... .... .... ಶ್ರೀರಾಮನಂ ಭೀಮನಂ" ೨-೧. ಭೀಮನನ್ನೂ ಆತನ ಸಾಹಸವನ್ನೂ ಮನಸಾರೆ ಕೊಂಡಾಡಿದಾನೆ. "ಇಂದೆನೆಗೆ ಸಂಶಯಮಂ ಕಳೆಕೌರವಾಂತಕ" ಎಂದು ದ್ರೌಪದಿ ಅಂಗಲಾಚಿ ಭೀಮನಲ್ಲಿರುವ ತನ್ನ ನಂಬುಗೆಯನ್ನು ಪ್ರಕಟಿಸಿದಾಳೆ. "ಕುರುಕುಲಾಂತಕಂ ಗಳಿತಕೋಪನೀ ಭೀಮಂ !" ಎಂದು ತನ್ನನ್ನು ತಾನೆ ಹೊಗಳಿಕೊಂಡು ತನ್ನ ಧೃಢಸಂಕಲ್ಪವನ್ನು ಸಾರಿದ್ದಾನೆ. "ಅಜ್ಜ ನಿರ್ದುರ್ಮಾರ್ಗರ್ಕ್ಕೊಡಮಿಾಯೆಂ !" ಸಂಕಲ್ಪವನ್ನು ಇನ್ನೂ ದೃಢೀಕರಿಸಿ ದ್ರೌಪದಿಯ ಮನಕ್ಕೆ ನೆಮ್ಮದಿಯಿತ್ತಿರುವನು. ದುರ್ಯೋಧನನನ್ನು ಹುಡುಕಿ ಸಾಕಾಗಿ ಭೀಮ ಅಬ್ಬರಿಸುವ ಭಾಗ ಓದುಗರನ್ನು ಬೆಚ್ಚಿಬೀಳಿಸುವಂತಿದೆ. "ಏರಿಸುವೆನೋ ಮೇರುಗಿರಿಯ ತೂಗಲತುದಿಯಂ" ಎಂದಾಗ ನಡುಗದವರಾರು ? "ಗಾಂಧಾರಿಯ ಬಸಿರಂ ಪೋಗ್ ಮಗುಳೆ ಪೊಗಿ ಪೊಕ್ಕಿರ್ದಪನೋ" ಎಂದು ಕಿರಚಿದಾಗ ಗಾಂಧಾರಿಯಗತಿ ಏನಾಗುತ್ತೋ ಎನ್ನುತ್ತಾ ನಾವೆಲ್ಲ ಪರಿತಪಿಸಬೇಕಾಗುವುದು. ದ್ರೌಪದಿಯ ಸಂಕಟವನ್ನು ನಿವರಿಸಿ "ನಿಷ್ಕರುಣಿಯಯ್ ನೀಂ" ಎಂದು ಧರ್ಮರಾಯನನ್ನು ಈತ ಮೂದಲಿಸುವಾಗ ಮೆಚ್ಚದಿರಲು ಹೇಗಾದೀತು.

ಆದರೆ ಗಾಂಧಾರಿಯ ಮುಂದೆ ಈ ಭೀಮಸೇನನೇ ಬಂದು "ಕೋಪಕೃತಾಪರಾಧಶತನಂ ನುಂಗಲ್ಕೆ ಪಿಂಗಾಕ್ಷನಂ" ಎಂದು ಹರಟುವಾಗ ಬೇಸರಿಸಿಕೊಳ್ಳದಿರಲು ಸಾಧ್ಯವೇ ? ಈತನ ಪಾತ್ರದ ಘನತೆ ಇಲ್ಲಿಂದ ಮುಂದಕೆ ಕುಗ್ಗಿಹೋಗುವುದು. ಅಮಾನುಷನಾಗುತ್ತಾ ಹೋಗುತ್ತಾನೆ ಭೀಮಸೇನ ! ಈತನ ಶಕ್ತಿಯನ್ನು ಕಂಡು ಬೆರಗಾಗಬಹುದು, ಬೆಚ್ಚಬಹುದು

———

ಶ್ರೀ. ಜಿ. ಬ್ರಹ್ಮಪ್ಪ, ಭರತೇಶನ ಬಾಳ್ಗಬ್ಬ, ಪು ೫೫

ಆದರೆ ಮೆಚ್ಚಲು ಸಾಧ್ಯವಿಲ್ಲ. ಒಟ್ಟಿನಲ್ಲಿ ನಿರ್ದಯ, ನಿಷ್ಠುರನಾಗಿ ನಮಗೆ ಗೋಚರಿಸುತ್ತಾನೆ. ದುರ್ಯೋಧನ ನೆಲಕ್ಕೆ ಬಿದ್ದಮೇಲೆ ಆತನ ಕಿರೀಟವನ್ನು ಈ ಭೀಮಸೇನ ಒದೆದು ಅಪಕೀರ್ತಿಗೆ ಪಕ್ಕಾಗಿ ಅಮಾನುಷನಾಗಿ ಹೋಗಿದಾನೆ. "ದುರ್ಯೋಧನ ಸೋತು ಗೆದ್ದ; ಭೀಮ ಗೆದ್ದು ಸೋತ; ಭೀಮನ ಜಯಲಾಭಕ್ಕಿಂತ ದುರ್ಯೋಧನನ ಸೋಲೇ ಹೆಚ್ಚು ಅಭಿನಂದನೆಗಳಿಗೆ ಅರ್ಹವೆಂದು ನಮಗೆ ತೋರುವುದು" +

ಒಟ್ಟಿನಲ್ಲಿ ಭೀಮನೆಂದರೆ ವಿವೇಚನಾರಹಿತನಾದ ಆವೇಶಮೂರ್ತಿಯೆನ್ನಬಹುದು. ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ ಪನ್ನಗಪತಾಕನನ್ನು ಒದ್ದು ಎಲ್ಲರ ಸಹಾನುಭೂತಿಯನ್ನು ಕಳಕೊಂಡು ಅಮಾನುಷನಾಗಿದ್ದಾನೆ ರನ್ನನ ಭೀಮಸೇನ.

ಭೀಷ್ಮ:—ಭೀಷ್ಮ ನಮ್ಮ ಕಣ್ಣಿಗೆ ಗೋಚರಿಸುವುದು ಒಮ್ಮೆಯೇ! ದುರ್ಯೋಧನ ಈತನನ್ನು ಕಾಣಲು ಬಂದಾಗ ಮಾತ್ರ. ಇದಕ್ಕೆ ಮೊದಲು ಧೃತರಾಷ್ಟ್ರ ತಾನು ಹೇಳುವುದನ್ನು ಹೇಳಿ ಮಗನನ್ನು ಭೀಷ್ಮರತ್ತ ಅಟ್ಟುವನು. ಭೀಷ್ಮರ ವ್ಯಕ್ತಿತ್ವದಲ್ಲಿ ಧೃತರಾಷ್ಟ್ರನಿಗೆ ಭಕ್ತಿಯಿದೆ, ಗೌರವವಿದೆ. "ನರಶರಕೋಟಿ .... ಮೋಹನಮೂಗದೆ" ೬—೧॥ ಇಲ್ಲಿ ಭೀಷ್ಮಾಚಾರ್ಯನ ಪರಾಕ್ರಮ ಪ್ರಕಟವಾಗುವುದು,ಹಾಗು ಆತನ ಮಾನೋಧರ್ಮ ಪ್ರಕಾಶಕ್ಕೆ ಬಂದಿದೆ. ಭೀಷ್ಮನೆಂದರೆ ನಿಷ್ಠಾಮಯಯೋಗಿ, ಪರಮ ಭಕ್ತ, ಮಹಾಪರಾಕ್ರಮಿ. ಇತರರಿಗಾಗಿ ಕೊನೆತನಕ ಹೆಣಗಿ ಹೆಣವಾಗುರುಳಿದ ನಿಸ್ವಾರ್ಥಜೀವನ ಈತನದು; ಸನ್ಯಾಸಿಯಂತೆ ಬಾಳಿದರೂ ಲೋಕದ ಶ್ರೇಯಸ್ಸಿಗಾಗಿ ಅರ್ಜಿಸಿ ಹೋರಾಡಿದ ಮಹಾವೀರನೀತ. ತನ್ನಕೈಯಲ್ಲೇ ಬೆಳೆದ ಕೌರವರು ಮತ್ತು ಪಾಂಡವರು ಹೋರಾಡುವುದನ್ನು ತಪ್ಪಿಸಲು ಕೊನೆತನಕ ಪ್ರಯತ್ನಿಸಿ ವಿಫಲವಾದ ಜೀವ ಈತನದು. ಅದರೂ ಕರ್ಮಯೋಗಿ ತನ್ನ ಪ್ರಯತ್ನ ಸಾಗಲಿ ಬಿಡಲಿ ಕರ್ತವ್ಯ

———

+ಶ್ರೀ. ಸಿ. ಕೆ. ವೆಂಕಟರಾಮಯ್ಯ, ರನ್ನಕವಿ ಪ್ರಶಸ್ತಿ ಪು ೪೧

ವೆಸಗುವುದೇ ಗುರಿಯಾಗಿಟ್ಟುಕೊಂಡು ಅನಾಸ್ತಕನಾಗಿ ಬಾಳಿದಾತ; ಸಾಯುವಾಗ ಮುಕುಂದನನ್ನು ಏಕಚಿತ್ತದಿಂದ ಸ್ಮರಿಸಿ ತಪವೆಸಗಿದಾತ; ತನ್ನ ಮಾತಿಗೆ ಸುಯೋಧನ ಒಡಂಬಡದಿರಲು ಧೃತರಾಷ್ಟ್ರನಿಗೆ ಭೀಷ್ಮ ಬರೆಸಪತ್ರ ವಿಚಿತ್ರವಾದುದು. "ಶರಮೊಂದಂ ತೆಗೆದು.... .... ಸಿಂಧುಸುತಂ." ೭-೧೫, ಈ ಭಾಗದಲ್ಲಿ ಆತನ ವೀರೋಚಿತಮಾರ್ಗ ನಮಗೆ ಮನವರಿಕೆಯಾಗದಿರದು. ದುರ್ಯೋಧನನ ಏಂಕಾಗಸಾಹಸವನ್ನು ಕಂಡು ಮನಸಾರೆ ಕೊಂಡಾಡುವನು; ಆದರೂ ಆತನನ್ನು ಉಳಿಸಲು ಕೊನೆಯುಪ್ರಯತ್ನವೆಸಗುವನು. ವೈಶಂಪಾಯನದಲ್ಲಿ ಜಲಮಂತ್ರದನೆರವಿಂದ ಅಡಗಿ ಕಾಲಹರಣವೆಸಗೆಂದು ದುರ್ಯೋಧನನಿಗೆ ಜಲಮಂತ್ರವನ್ನರುಹಿ ಕಳಿಸುವನು. ಮಾನವನ ಶ್ರೇಯಸ್ಸಿಗಾಗಿ ಪರಿತಪಿಸಿ ಪರಿತಪಿಸಿ ಪರಂಧಾಮವನ್ನೈದಿದ ಪಾವನ ಮೂರ್ತಿ ರನ್ನನ ಭೀಷ್ಮಾಚಾರ್ಯ!

ಧರ್ಮರಾಯ :— ಧರ್ಮರಾಯ ಸತ್ವಗುಣ ಪ್ರಧಾನನಾದವ್ಯಕ್ತಿ. ಲೋಕದ ಶ್ರೇಯಸ್ಸಿಗಾಗಿ ಪ್ರತಿಷ್ಠೆಯನ್ನಾದರೂ ತೊರೆದು ಬಾಳುವ ಹಿರಿಯ ಜೀವ ಈತನದು; ಭೀಮ "ನಿಷ್ಕರುಣಿಯಯ್" ಎಂದು ಹಿಯ್ಯಾಳಿಸಿದಾಗಲೂ ತಾಳ್ಮೆಯಿಂದ ಸಹಿಸಿದ ಮಹದ್ವ್ಯಕ್ತಿ ರನ್ನನ ಧರ್ಮರಾಯ. ದುರ್ಯೋಧನ ನೀರಲ್ಲಡಗಿದ್ದನ್ನು ಕೇಳಿ ವಂಶದ ಘನತೆಗಾಗಿ ಕಂಬನಿಹರಿಸಿದ ಘನತರ ಬಾಳು ಈತನದು! ದುರ್ಯೋಧನನ್ನು ಕುರಿತು ಒಂದಾದರೂ ಕೆಟ್ಟಮಾತು ಈತನ ಬಾಯಿಂದ ಬಂದಿಲ್ಲ "ಆಗದು ಸನುರಂ .... ಸುಖಮಿರಲಾಗ" ೨. ೫೨ ಎಂದು ದುರ್ಯೋಧನನೊಡನೆ ನುಡಿದಾಗ ಈತನನ್ನು ಕ್ಷಮಾಶೀಲನೆಂದು ಕೊಂಡಾಡದವರಾರು ?

ಧೃತರಾಷ್ಟ್ರ ಗಾಂಧಾರಿಯರನ್ನು ಕುರಿತು "ನಿಮಗಾಂಮಗನಲ್ಲನೆ ನೀಮೆ ತಂದೆ ತಾಯುಂ', ಎಂದು ನಮ್ರನಾಗಿ ನುಡಿಯುತ್ತಾನೆ. ಸ್ನೇಹ ಸೌಹಾರ್ದತೆಗಳ ಸಾಕಾರ ಮೂರ್ತಿಯೇ ಧರ್ಮರಾಯ!

ದ್ರೌಪದಿ:—ಗದಾಯುದ್ಧದಲ್ಲಿ ನಾವು ದ್ರೌಪದಿಯನ್ನು ಕಾಣುವುದು ಎರಡೇಬಾರಿ. ಅನವರತವಾರಿಧಾರಾಪೂರಿತ ಪಲ್ಲವನೇತ್ರೆ ಅಸಹ್ಯ ಪರಿಭವಾನಲ ದಂದಹ್ಯಮಾನಗಾತ್ರೆ ಯಜ್ಞವೇದಿ ಸಂಭವೆ ದ್ರುಪದ ರಾಜೋಪವನ ಜಯನ್ವೈಜಯಂತಿ ಎಂಬುದಾಗಿ ರನ್ನ ಮಹಾಕವಿ ಈಕೆಯ ವ್ಯಕ್ತಿತ್ವವನ್ನು ನಮಗೆ ಪರಿಚಯಮಾಡಿ ಕೊಟ್ಟದ್ದಾನೆ ಯಾರಿಗೆ ಯುದ್ಧ ಬೇಡವಾದರೂ ಈಕೆಗೆ ಮಾತ್ರ ಬೇಕಾಗಿದೆ. ಕ್ಷಣಕ್ಷಣಕ್ಕೂ ಭೀಮನನ್ನು ಹಿಂಬಾಲಿಸಿ "ಅನುಶಯ ಮಾದುದಿಂದೆನಗೆ ಸಂಶಯಮಂ ಕಳೆ ಕೌರವಾಂತಕ!" ಎಂಬುದಾಗಿ ಪೀಡಿಸಿ ಕಾಡುತ್ತಿರುತ್ತಾಳೆ. "ಸೀನಂಗಳ ಗಳಿತಕೋಪನಿರ್ಪ ತೆರದಿಂ ದಿರ್ದಯ್" ಎಂದು ಆಕ್ಷೇಪಿಸುತ್ತಾಳೆ. ವನವಾಸವೆದಲ್ ನಿಮಗೆ ಶರಣೆನಗಂದು ಅಗ್ನಿಮುಖವೆ ಪುಟ್ಟಿದುದರಿಂದೆ ಶರಣಾಗ್ನಿ ಮುಖಂ ಎಂಬುದಾಗಿ ಎಚ್ಚರಿಕೆಯನ್ನೀಯುತ್ತಾಳೆ. "ಶಸ್ತ್ರವ್ರಣಮಂ ನಿನ್ನಂತೆ ಮರೆವುದಿರಿವ ಬೆಡಂಗ" ಭೀಮನನ್ನು ಪ್ರಚೋದಿಸುತ್ತಾಳೆ. ವಿದೂಷಕ ಈಕೆಗೆ ಒಳ್ಳೆ ಬಿರುದಿತ್ತಿದ್ದಾನೆ "ಎರಡನೆ ಹಿಡಿಂಬೆಯನೆನ್ನರಸಂ ರಕ್ಕಸಿಯನೆಲ್ಲಿ ತಂದನೋ ಸಿನ್ನಂ!"

ಪರಶುರಾಮ ಇಪ್ಪತ್ತೊಂದು ಬಾರಿ ಹುಟ್ಟಿ ತನ್ನ ಪ್ರತೀಕಾರ ವನ್ನು ತೀರಿಸಿಕೊಂಡನಂತೆ ಆದರೆ ದ್ರೌಪದಿ ಒಂದೇ ಹುಟ್ಟಿನಲ್ಲಿ ಪರಶುರಾಮನಿಗಿಂತ ಮಿಗಿಲಾದ ರಕ್ತದ ಕೋಡಿಯನ್ನು ಹರಿಸಿದಳು! ಕೇವಲ ಹದಿನೆಂಟುದಿನಗಳಲ್ಲಿ ಅನೇಕ ಅಕ್ಷೌಹಿಣಿ ಬಲವನ್ನು ನೀಗಿ ನೀರುಕುಡಿದಳು! ಪರಶುರಾಮನಿಗೂ ಈಕೆಗೂ ಅಜಗಜಾಂತರ! ವೈರಿ ವೃಂದದ ನೆತ್ತರ ನದಿಯಲ್ಲಿ ನಿರಾಯಾಸವಾಗಿ ಕಿಲಿಕಿಲಿನಗುತ್ತ ಈಸುವ ವ್ಯಕ್ತಿ ಈದ್ರೌಪದಿ! ಪ್ರತೀಕಾರದ ಸಾಕಾರ ಮೂರ್ತಿ ಈ ದ್ರೌಪದಿ. ದುರ್ಯೋಧನನ ಕೊಲೆಯನ್ನು ಕಂಡಮೇಲೆ ದುಃಖವೆಲ್ಲ ಹೋಗಿ ಅಪರಂಜಿಯಂತೆ ಕಂಗೊಳಿಸಿದಳಂತೆ. ಈಕೆಯಲ್ಲಿ ಕ್ಷಮಾಗುಣವೇ ಇಲ್ಲ ಪಾಷಾಣಹೃದಯ ಪಾಂಚಾಲೆಯದು. ಚಂಡಿ ಚಾಮುಂಡಿಯಾಗಿ ಮೆರೆದು ನರಮೇಧವನ್ನೆ ನಡೆಸಿದಳು. ಈಕೆಯಿಲ್ಲದೆ ಹೋಗಿದ್ದರೆ

ಶ್ರೀಕೃಷ್ಣ ಭಗವದ್ಗೀತೆಯನ್ನು ಹೇಗೆತಂದನೋ ಹಾಗೆಯೇ ಹಿಂದಕ್ಕೆ ತೆಗೆದುಕೊಂಡು ಹೋಗ ಬೇಕಾಗಿತ್ತು!

ರನ್ನಮಹಾಕವಿ ಒಂದೆರಡು ಮಾತಿನಲ್ಲಿ ಒಟ್ಟನ ಬಾಳ್ವೆಯನ್ನು ಅಳೆದು ಅದರ ಆಕಾರವನ್ನೂ ಅದರ ಒಳಗು ಹೊರಗನ್ನೂ ಚಿತ್ರಿಸು ವಂಥ ಕುಶಲಕರ್ಮಿ! ಸಂಜಯನನ್ನು "ನಿಸರ್ಗ ಮೂರ್ಖ, ಸ್ವಭಾವ ದೃಢ, ಸ್ವಾಮಿಹಿತ" ಎಂದ ಕರೆದು ಆಪಾತ್ರವನ್ನು ಕಡೆದು ನಿಲ್ಲಿಸಿದಾನೆ.

ಬಲರಾಮನ ಆಕಾರವನ್ನೂ ಸ್ವಲ್ಪದರಲ್ಲೇ ಕೆತ್ತಿ ಕಾಣಿಸಿದಾನೆ ಹಲಮುಸಲಪಾಣಿ, ಮಧುಪಾಟಲನೇತ್ರ, ನೀಲವಸನನ್ ಧವಳಾಂಗನ್ ಬಲನೇಕಕುಂಡಲನ್, ತಾಳಲಕ್ಷ್ಮ ಈಮಾತುಗಳನ್ನು ಗ್ರಹಿಸಿ ಚಿತ್ರಕಾರ ಸುಲಭವಾಗಿ ಬಲರಾಮನ ಆಕಾರವನ್ನು ಬಿಡಿಸಬಹುದು. ಬರೀ ಆ ಕಾರವೇ ಅಲ್ಲ ಆಮೂರ್ತಿಗೆ ಪ್ರಾಣಪ್ರತಿಷ್ಠೆಯನ್ನೂ ಮಹಾಕವಿ ಮಾಡಿದಾನೆ "ಸುಯೋಧನಂಗೆ ಸೈಪು ಬರ್ಪಂತೆಯುಂ ಜಂಗಮ ಹಿಮಾಚಲಮೆ ಬರ್ಪಂತೆಯುಂ" ಎಂದು ಕರೆದು ಬಲರಾಮನ ಆಂತರಿಕ ಔನ್ನತ್ಯವನ್ನು ಮನಗಾಣುವಂತೆ ಮಾಡಿದಾನೆ.

ಅಶ್ವತ್ಥಾಮನ ವ್ಯಕ್ತಿತ್ವದಮೇಲೂ ಮಹಾಕವಿ ತನ್ನಮಾಯಾಕುಂ ಚವಾಡಿಸಿರುವನು ಲಕ್ಷ್ಮಿಯನ್ನು ಪರಿಹಾಸ್ಯ ಮಾಡುವಾಗಲೆ ಆತನ ವ್ಯಕ್ತಿತ್ವ ಪ್ರಕಾಶಕ್ಕೆ ಬರುತ್ತದೆ. ಅದೃಷ್ಟವನ್ನು ಚಣಕಾಲ ತನ್ನ ಹಿಡಿತದಲ್ಲಿಟ್ಟು ಕೊಳ್ಳುವಂತಹ ಪ್ರಚಂಡವ್ಯಕ್ತಿ ಅಶ್ವತ್ಥಾಮ! ಸ್ವಾಮಿ ಭಕ್ತ! ತನ್ನಿಂದ ಸ್ವಾಮಿಕಾರ್ಯ ಏನಾದರೂ ನೆಡೆಯುವಂತಾಗಲಿ ಎಂಬ ಆತುರದಿಂದ ದುಡಿಕಿ ಪಂಚಪಾಂಡವರನ್ನು ಕೊಂದು ಪಶ್ಚಾತ್ತಾಪಕ್ಕೀ ಡಾಗುವ ದುರಂತ ಜೀವನ ಈತನದು. ರಜೋಗುಣದಿಂದ ಉರಿಯುವ ಉಗ್ರಮೂರ್ತಿ ರುದ್ರಾವತಾರನಾದ ಅಶ್ವತ್ಥಾಮ.!

———

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೭ | ೧೭ | ಉಳಿದಿರುವವನನ್ನೂ | ಉಳಿದಿರುವವನನ್ನೂ |
| ೮ | ೧೨ | ಕುರುರಾಜನ್ವಯಂ | ಕುರುರಾಜಾನ್ವಯಂ |
| ,, | ೧೩ | ದಿದುಪೆ | ದಿದುವೆ |
| ೯ | ೬ | ಮೂರ್ಛೆಗೆ | ಮೂರ್ಛೆಗೆ |
| ,, | ೧೨ | ತೊಗಿದ | ತೊಡಗಿದ |
| ೧೦ | ೧ | ನವನೂತಂ | ನವನೂತನ |
| ೧೧ | ೭ | ವಚನ ಳನ್ನಾಡಿ | ವಚನಗಳನ್ನಾಡಿ |
| ೧೫ | ೨೭ | ಮಿಳ್ಮಿ ನೆ | ಮಿಳ್ಮಿಳನೆ |
| ,, | ೨೬ | ಬಲರವರಿಂದ | ಬಲರದರಿಂದ |
| ೧೬ | ೨೪ | ಕೆಡುಗೆದರಿ | ಕಿಡಿಗೆದರಿ |
| ೨೨ | ೧೭ | ನೆರವೆತ್ತಿ | ಸಿರವೆತ್ತಿ |
| ,, | ೧೮ | ಗ್ರಹಕ್ಕೆ | ಗ್ರಕ್ಕೆ |
| ೨೩ | ೫ | ಮೈಮರೆದು | ಮೈಮರೆದ |
| ,, | ೯ | ಯಮನೊಳ್ | ಯಮಜನೊಳ್ |
| ,, | ೧೭ | ಕೊಂದು | ಕೊಂದ |
| ೨೪ | ೭ | ದ್ವೇಶ | ದ್ವೇಷ |
| ೨೫ | ೨೧ | ತಿಳಿದಾಕ್ಷಣ | ತಿಳಿಸಿದಾಕ್ಷಣ |
| ೨೬ | ೧೪ | ಇರ್ಕಣ್ಗುರುಡವೆಂ | ಇರ್ಕಣ್ಗುರುಡರೆಂ |
| ೨೭ | ೧೩ | ಕೊಟ್ಟದಾನೆ. | ತೊಟ್ಟದಾನೆ |

| | | | |
|---|---|---|---|
| ೧೦ | ೧೯ | ಯೇಕಿಸಿರದಿರ್ದೆ | ಯೇಕುಸಿರದಿರ್ದೆ |
| ೪೨ | ೨೧ | ತಾರೊಗಿಪೆ | ತಾರೋಗಿಪೆ |
| ೪೩ | ೨೫ | ಪ್ರೇರಿಪಿಸಿದ್ದಾನೆ | ಪ್ರೇರೇಪಿಸಿದ್ದಾನೆ |
| ೪೪ | ೨೦ | ಕರ್ಣನೊಳವಂಶದ | ಕರ್ಣನಳವಂಕದ |
| ೪೭ | ೮ | ಧವಳಿಸಿ | ಧವಳಿಸೆ |
| ೪೯ | ೯ | ಪುದುವಾಳಲ್ಕಣಮಾ | ಪುದುವಾಳಲ್ಕಣಮಾಗ |
| ೫೧ | ೪ | ಅವರ | ಅವನ |
| ,, | ೭ | ಜಯವೆಂಬುದು | ಜಯಮೆಂಬುದು |
| ೫೫ | ೩ | ಉಪಾದಿಸ | ಪ್ರತಿಪಾದಿಸ |
| ,, | ೫ | ನೀರೊಳಗಿರ್ದ೦ | ನೀರೊಳಗಿರ್ದು೦ |
| ,, | ೧೫ | ಪೂಣ್ದುದಿಲ್ಲ | ಮಾಣ್ದುದಿಲ್ಲ |
| ೬೯ | ೧೦ | ಕುಡಿದು | ಕುದಿದು |
| ೭೦ | ೧೫ | ಅಪಹಾಸ್ಯಮಾಡು | ಅಪಹಾಸ್ಯಮಾಡ |
| ೭೬ | ೨೩ | ಕೊಂಪಾಡಿದಾನೆ | ಕೊಂಡಾಡಿದಾನೆ |

———

